


# ಹಿಂಗಾರ

## ಅರೆಬಾಸೆ ತ್ರೈಮಾಸಿಕ



ಸಂಪುಟ : 5 ಸಂಚಿಕೆ : 7 ದಿನಾಂಕ : 30-09-2021 ಬೆಲೆ : ರೂ. 20

ಜುಲಾಯಿ-ಅಗೋಸ್ತು-ಸಪ್ಟೆಂಬರ್ 2021

75 ಸ್ವಾತಂತ್ರ್ಯದ ಅಮೃತಮಹೋತ್ಸವ



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ದಶ ವರ್ಷ ಸಂಭ್ರಮ

2011-2021



ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ




ಅಕಾಡೆಮಿನ ದಶ ಸಂಭ್ರಮದ ಉದ್ಘಾಟನಾ ಜಂಭರ




ಮರಗೋಡ್‌ಲಿ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನೆ




ಕೆ.ಎಸ್.ಎಸ್.ಕಾಲೇಜ್‌ಲಿ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನೆ



ಏನೆಕಲ್ಲ್‌ಲಿ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನೆ




ಭಾಗಮಂಡ್ಲಲಿ ಅರೆಭಾಷೆ ಸಂಸ್ಕೃತಿ ಶಿಬಿರಂದ ಉದ್ಘಾಟನೆ

# ಹಿಂಗಾರ ತ್ರೈಮಾಸಿಕ






ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
**ಮಡಿಕೇರಿ**

# ಹಿಂಗಾರ

**ಅರೆಭಾಷೆ ತ್ರೈಮಾಸಿಕ**

ಸಂಪುಟ : 5 ಸಂಚಿಕೆ : 7

ದಿನಾಂಕ : 30–09–2021 ಕೊಡಗು ರೂ. 20

ಪ್ರಧಾನ ಸಂಪಾದಕರ್
**ಲಕ್ಷ್ಮೀನಾರಾಯಣ ಕಜೆಗದ್ದೆ**

ಸಂಪಾದಕರ್
**ಡಾ. ದಯಾನಂದ ಕೂಡಕಂಡಿ**

ಸಹಸಂಪಾದಕರ್
**ಪುರುಷೋತ್ತಮ ಕಿರ್ಲಾಯ**

| **HINGARA** | **ಹಿಂಗಾರ** |
| ---: | --- |
| A Quarterly Magazine | ತ್ರೈಮಾಸಿಕ ಪತ್ರಿಕೆ |
| Published by | ಪ್ರಕಾಶಕರು |
| **Karnataka Arebhase Samskruthi** | **ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು** |
| **Mathu Sahitya Academy** | **ಸಾಹಿತ್ಯ ಅಕಾಡೆಮಿ** |
| Coffee Krip, 1st Floor | ಕಾಫಿ ಕೃಪಾ, ಒಂದನೇ ಮಹಡಿ, |
| Rajaseat Rd, Madikeri - 571 201 | ರಾಜಸೀಟ್ ರಸ್ತೆ, ಮಡಿಕೇರಿ–571201 |
| Ph : 08272-223055 | ದೂರವಾಣಿ : 08272–223055 |
| arebaseacademy@gmail.ocm | arebaseacademy@gmail.ocm |
| www.arebaseacademy.com | www.arebaseacademy.com |
| Chief Editor | ಪ್ರಧಾನ ಸಂಪಾದಕರ್ |
| **Lakshminarayana Kajegadhe** | **ಲಕ್ಷ್ಮೀನಾರಾಯಣ ಕಜೆಗದ್ದೆ** |
| Editor | ಸಂಪಾದಕರ್ |
| **Dr. Dayananda Kudakandi** | **ಡಾ. ದಯಾನಂದ ಕೂಡಕಂಡಿ** |
| Managing Editor | ವ್ಯವಸ್ಥಾಪಕ ಸಂಪಾದಕರ್ |
| **Chinnaswamy** | **ಚಿನ್ನಸ್ವಾಮಿ** |
| Cover Page Photo | ಮುಖಪುಟ ಚಿತ್ರ |
| **Thekkade Kumarswamy** | **ತೆಕ್ಕಡೆ ಕುಮಾರಸ್ವಾಮಿ** |
| Printed at | ಮುದ್ರಣ |
| **Aakrithi Prints** | **ಆಕೃತಿ ಪ್ರಿಂಟ್ಸ್** |
| Mangaluru | ಮಂಗಳೂರು |
| Ph. 0824-2972002 | ದೂರವಾಣಿ : 0824–2972002 |
| Pages : 80 | ಪುಟಗಳು : 80 |
| Copis : 1800 | ಪ್ರತಿಗಳು : 1800 |
| Vol : 5 - 7 | ಸಂಪುಟ 5 ಸಂಚಿಕೆ 7 |
| Period : July to September | ಜುಲಾಯಿ – ಸಪ್ಟೆಂಬರ್ |
| Price : Rs. 20 | ಬೆಲೆ : ರೂ. 20/– |
| 3 year subscription : | ತ್ರೈವಾರ್ಷಿಕ ಚಂದಾ : |
| Rs. 200 | ರೂ. 200 |



# ಅಧ್ಯಕ್ಷರ ಮಾತ್

ಎಲ್ಲವುಕೆ ನಮಸ್ಕಾರ.

ಜುಲೈ, ಆಗಸ್ಟ್, ಸೆಪ್ಟೆಂಬರ್ ತಿಂಗಳ ಸಂಚಿಕೆನ ಹಿಡ್ಕಂಡ್ ಮತ್ತೆ ನಿಮ್ಮ ಮುಂದೆ ಬಂದೊಳ. ಮುಖ್ಯವಾಗಿ ಈ ಹೊತ್ತುಲೀ ಎಲ್ಲವುಕೂ ಗ್ಯಾನ ಇದ್ದದ್ ಸಂಸ್ಕೃತಿ ಶಿಬಿರ ಮಾಡುದರ ಬಗ್ಗೆ. ಒಂದು ರೀತಿಲಿ ಹಿರಿಯರ್ ನಡ್ಸಿಕಂಡ್ ಬರ್ತಿದ್ದ ನಮ್ಮ ಪದ್ಧತಿಗ ಮರೆಯಾಗಿ ಬುಟ್ಟದೆ ಏನೋಂತೇಳುವ ಆತಂಕ ಇರುವ ಕಾರಣ, ನಮ್ಮ ಸಂಸ್ಕೃತಿನ ಮುಂದಿನ ಪೀಳಿಗೆಗೂ ಹೇಳಿಕೊಡೋಕುಂತೇಳುವ ಉದ್ದೇಶ ನಮ್ಮದ್. ಹಂಗಾಗಿ ಮಡಿಕೇರಿಲಿ ಸುರುವಾದ ನಮ್ಮ ಈ ಸಂಸ್ಕೃತಿ ಶಿಬಿರ ಹತ್ತು ಊರುಗಳ್‌ಲಿ ಈಗಾಗಲೇ ಆತ್. ಇನ್ನೂ ಕೂಡ ನಮ್ಮ ನಮ್ಮ ಊರುಲಿ ಶಿಬಿರ ಮಾಡೊಕುಂತ ಹೇಳುವ ಕರೆ ನಾವ್‌ಗೆ ಬರ್‍ತಾ ಉಟ್ಟು. ಅಂದರೆ ಸಂಸ್ಕೃತಿ, ಭಾಷೆ ಬಗ್ಗೆ ನಮ್ಮ ಜನಂಗಳಿಗೆ ಪ್ರೀತಿ ಉಟ್ಟುತ ಗೊತ್ತಾದೆ. ಈ ಪ್ರೀತಿನೇ ನಮ್ಮ ಸಂಸ್ಕೃತಿಯ ಬೆಳೆಸಿ ಉಳಿಸುವಂಗೆ ಮಾಡ್ದೆ.

ನಮ್ಮ ಅಕಾಡೆಮಿ ಸುರು ಆಗಿ ಹತ್ತು ವರ್ಸ ಆತ್. ಈ ನೆಪಲಿ ನಾವು ದಶಮಾನೋತ್ಸವ ಜಂಬರ ಮಾಡ್ಡೋ. ಪುಸ್ತಕಗಳ ಡಿಜಿಟಲೀಕರಣ, ಸಾಕ್ಷ್ಯಚಿತ್ರ ಬಿಡುಗಡೆ, ಅರೆಬಾಸೆ ಪದ್ಯದ ಧ್ವನಿಸುರುಳಿ ಬಿಡುಗಡೆನ ಈ ಜಂಬರಲಿ ಆತ್. ಒಲಂಪಿಕ್ಸ್‌ಲಿ ಹಾಕಿ ಕೋಚ್ ಆಗಿ ಭಾರತನ ಪ್ರತಿನಿಧಿಸಿದ ಅರೆಬಾಸೆ ಕ್ರೀಡಾಪಟು ಅಂಕಿತಾ ಅವ್ಕೆ ಸನ್ಮಾನ ಮಾಡ್ಡೋ.

ಕಾಲೇಜ್ ರಂಗ ಭೂಮಿಗೆ ಪ್ರೋತ್ಸಾಹ ಕೊಡೊಕುಂತೇಳಿ ಯೋಚನೆ ಮಾಡಿ ಕುಕ್ಕೆ ಸುಬ್ರಹ್ಮಣ್ಯ ಕಾಲೇಜಿನ ಕುಸುಮ ಸಾರಂಗ ರಂಗ ಘಟಕದ ಮಕ್ಕಳಿಗೆ ರಂಗ ತರಬೇತಿ ಶಿಬಿರನ ರಂಗ ಭೂಮಿಲಿ ಹೆಸರು ಮಾಡ್ದ ಯುವ ನಿರ್ದೇಶಕ ಪ್ರವೀಣ ಎಡಮಂಗಲ ಇವರ ನಿರ್ದೇಶನಲಿ ಶಿಬಿರ ಹಮ್ಮಿಕೊಂಡೊಳೊ. ಈ ಶಿಬಿರಲಿ ಸುಮಾರು ಮೂವತ್ತೈದು ಮಕ್ಕ ಭಾಗವಹಿಸ್ತ ಒಳೊ ಅಂತ ಹೇಳಿಕಣಿಕೆ ತುಂಬಾ ಕುಸಿ ಆದೆ.

ಈ ಎಲ್ಲ ಚಟುವಟಿಕೆಗಳ ನಡುವೆ, ಅಕಾಡೆಮಿ ಸದಸ್ಯರಿಗೆ ಒಂದು ತರಬೇತಿ ಕಾರ್ಯಗಾರ ಬೇಕಿತ್ತ್ ಅಂತ ಅನ್ನಿಸಿ ಅದರ ತೀರ್ಥಹಳ್ಳಿಯ ರಾಷ್ಟ್ರಕವಿ ಕುವೆಂಪುರವರ ಮನೆ ಕುಪ್ಪಳ್ಳಿಲಿ ಹಮ್ಮಿಕೊಂಡ. ಅಕಾಡೆಮಿ ಸದಸ್ಯರ ಕೆಲ್ಸ, ಅಕಾಡೆಮಿಯ ಕಾರ್ಯ ಚಟುವಟಿಕೆಗಳ ಬಗ್ಗೆ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಡಾ| ಬಿ.ವಿ.ವಸಂತ ಕುಮಾರ್, ಹಂಗೆ ವಾದಿರಾಜ್ ಅವು ಸಂಪನ್ಮೂಲ ವ್ಯಕ್ತಿಗಳ ನೆಲೇಲಿ ಭಾರೀ ಲಾಯ್ಕಲಿ ನಾವ್‌ಗೆ ತಿಳ್ಸಿ ಕೊಟ್ಟೋ. ಅಕಾಡೆಮಿಯ ಕಾರ್ಯ ಚಟುವಟಿಕೆಗಳ ಬಗ್ಗೆ ಮತ್ತಷ್ಟ್ ಸ್ಪಷ್ಟತೆ ನಾವ್‌ಗೆ ಸಿಕ್ಕಿದಂಗೆ ಆತ್. ನಮ್ಮ ಮುಂದಿನ ಯೋಜನೆಗಳನ್ನ ಹೆಂಗೆ ನಿಶ್ಚಿತ ಸಮಯಲಿ ಮುಗಿಸೋಕು ಅಂತ ಚರ್ಚಿಸಿದೋ. ಈಗ ಒಂದಷ್ಟು ಕೆಲ್ಸಗ ನಮ್ಮ ಮುಂದೆ ಉಟ್ಟು. ಅರೆಬಾಷಿಕ ಸಮುದಾಯದವರ ಒಟ್ಟು ಸೇರಿಸಿಕಂಡ್ ಅದರ ಕಾರ್ಯಗತ ಮಾಡಿಕೆ ಪ್ರಯತ್ನಿಸ್ತ ಒಳೋ. ನಿಮ್ಮೆಲ್ಲರ ಸಹಕಾರ ಹಿಂಗೆ ಇರಲಿ. ಈ ಸಲದ ಸಂಚಿಕೆ ಹೆಂಗುಟ್ಟುತೇಳಿ ಓದಿ, ಬರೆಯನಿ.

ನಮಸ್ಕಾರಗ

**ಲಕ್ಷ್ಮೀನಾರಾಯಣ ಕಜೆಗದ್ದೆ**



# ಸಂಪಾದಕರ ಮಾತ್

ಅರೆಬಾಸೆನ ಹಿಂಗಾರ ತ್ರೈಮಾಸಿಕ ಪುಸ್ತಕನ ಓದ್‌ವ ಪ್ರೀತಿಯ ಎಲ್ಲ ಅರೆಬಾಸೆ ಓದ್‌ಗರಿಗೆ ನಮಸ್ಕಾರಗ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿಂದ ಹೊರತರ್‌ತ್ತಿರ್‌ವ ಹಿಂಗಾರ ತ್ರೈಮಾಸಿಕನ ಚಂದಾದಾರ್‍ರಾಗಿ, ನಿರಂತರಾಗಿ ಓದಿಕಂಡ್ ಮೌಲ್ಯದ ಬರಹಗಳ್ನ ಮತ್ತೆ ಒಳ್ಳೆ ಸಲಹೆಗಳ್ನ ಕೊಟ್ಟ್ ಸಹಕರಿಸ್ತಿರುವ ನೀವ್‌ಗೆ ಹೃದಯ ತುಂಬಿದ ಧನ್ಯವಾದಗ.

ಈ ಹಿಂಗಾರ ತ್ರೈಮಾಸಿಕ ಪುಸ್ತಕ ನಾಲ್ಕನೆ ಸುಂಪುಟದ ಏಳನೇ ಸಂಚಿಕೆ. ಈ ಸಂಚಿಕೆಲಿ 2021ರ ಜುಲೈಂದ ಸೆಪ್ಟಂಬರ್ ತಿಂಗಳ್ನವರೆಗಿನ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ನಡ್‌ಸಿದ ಕಾರ್ಯಕ್ರಮಗಳನ್ನ ಸಂಕಲಿಸ್ಯೊಳೊ.

ಈ ಸಂಚಿಕೆಲಿ ವ್ಯಕ್ತಿ ಪರಿಚಯ ವಿಭಾಗಲಿ ಭಾರತದ ಮಹಿಳಾ ಹಾಕಿ ತಂಡದ ಸಹಾಯಕ ಕೋಚ್ ಹೊನ್ನಂಪಾಡಿ ಅಂಕಿತಾ ಸುರೇಶ್‌ರವ್ರ ಪರಿಚಯನ ಕೂಡಕಂಡಿ ಓಂಶ್ರೀ ದಯಾನಂದನವು ಮಾಡ್ಯೊಳೊ. ಸಂಸ್ಕೃತಿ ದರ್ಪಣಲಿ ಜೀವನ್ ಪುರ ಅವ್ರ 'ಅರೆಬಾಸೆ ಚುಟುಕ್‌ಗ', ಅನುಭವ ವಿಭಾಗಲಿ ಅನುಷಾ ಅವ್ರ 'ಸುರು ಸೀರೆ ಸುತ್ತಿದ ನೆನ್ಪು' ಮತ್ತೆ ಸ್ಮಿತಾ ಅಮೃತರಾಜ್ ಅವ್ರ 'ಮೇಕೇರಿಯ ಹಾಲ್ಕಾಪಿಯ ದಿನಂಗ' ತೇಳುವ ಅನುಭವನ ಹಂಚಿಕೊಂಡೊಳೊ. ಉದಯಕುಮಾರಿ ಅವ್ರ 'ಮನಸ್ಸೇ ರಿಲ್ಯಾಕ್ಸ್ ಪ್ಲೀಸ್' ಮತ್ತೆ ಪೂರ್ಣಿಮ ತಂಟೆಪ್ಪಾಡಿ ಅವ್ರ 'ಮಾಯಾ ಕನ್ನಡಿ' ಅಂತೇಳ್‌ವ ವೈಚಾರಿಕ ಬರವಣಿಗೆಗಳ ಪ್ರಕಟಿಸ್ಯೊಳೊ.

ಕಥಾ ಜೊಂಪೆ ವಿಭಾಗಲಿ ಎಂ.ಜಿ.ಕಜೆ ಅವ್ರ 'ಕಿಚ್ಚಿ ಇಲ್ಲದೆ ಹೊಗೆ ಬಾದುಲೆ' ಮತ್ತೆ ಲಲಿತಾ ಕಟ್ರತನವು ಬರ್ದ 'ನಿರ್ಧಾರ' ಹಾಂಗೆ ಪುರಾಣ ಕಥಾ ಜೊಂಪೆಲಿ ಸೂರಜ್ ಅಮೆಮನೆವು ಬರ್ದ 'ತಾವೂರು ಶಕ್ತಿ ದೇವತೆ ಮಹಿಷಾಸುರ ಮರ್ದಿನಿ ತಾಯಿನ ಮಹಾತ್ಮೆ'ನ, ನೈಜ ಕಥೆ ವಿಭಾಗಲಿ

ಜಯಪ್ರಕಾಶ್ ಮೋಂಟಡ್ಕವು ಬರ್ದ 'ಯಾರಿಗೂ ಹೇಳ್‌ಬಡಿ' ತೇಳುವ ಕಥೆನ ಪ್ರಕಟಿಸ್ಯೊಳೊ.

ಅಕಾಡೆಮಿನ ವತಿಂದ ನಡ್ದ ಅರೆಬಾಸೆ ಲಲಿತ ಪ್ರಬಂಧ ಸ್ಪರ್ಧೆಲಿ ಕೊಟ್ಟಕೇರಿಯನ ಲೀಲಾ ದಯಾನಂದವು ಬರ್ದ 'ಕರ್ಡೇ ಕಾಲದ ಕಾಳಜಿ' ಮೊದಲ್‌ನೆ ಬಹುಮಾನನ ಮತ್ತೆ ಎಡಿಕೇರಿ ವಿಶ್ವನಾಥವು ಬರ್ದ 'ಚಾಂಪ–ಚಾಪವ್ವ ಮತ್ತೆ ಪಿಳ್ಳಿಕ' ತೇಳುವ ಬರವಣಿಗೆ ಎರಡ್ನೆ ಬಹುಮಾನನ ಪಡ್ಕಂಡಿತ್. ಅದನ್ನ ಇಲ್ಲಿ ಪ್ರಕಟಿಸ್ಯೊಳೊ. ಹರಟೆ ಮತ್ತೆ ಹಾಸ್ಯ ವಿಭಾಗಲಿ ಸೂದನ ಈರಪ್ಪವು ಬರ್ದ 'ಪಟೇಲನ ಕಾಗದನೂ ತಾಮೂಣಿನ ಕೋಳಿಯು' ತೇಳುದನ್ನ, ಓದ್‌ಗರ ವಿಭಾಗಲಿ ಪಿ.ಜಿ.ಅಂಬೆಕಲ್‌ವು ಬರ್ದ 'ಬನ್ನಿ ಪುಸ್ತಕ ಓದೊಮ' ತೇಳ್ದನ ಪ್ರಕಟಿಸ್ಯೊಳೊ. ಕವನ ವಿಭಾಗಲಿ ಸಿಂಚನವು ಬರ್ದ 'ನನ್ನ ಈ ಕೋಳಿಗಳ ಕಥೆ', ಮಾವಜಿ ರಾಮಣ್ಣ ಅಚ್ಯುತವು ಬರ್ದ 'ಬಾ ಹಕ್ಕಲೆ', ಕುಡೆಕಲ್ ಸಂತೋಷವು ಬರ್ದ 'ಜೀವನ' ಹಾಂಗೆ ಮೋಟೇರ ಕೆ.ಗೋಪಾಲಕೃಷ್ಣವು ಬರ್ದ 'ಕೊಡ್ಗ್‌ನ ಗೂಡೆ' ತೇಳುವ ಕವನನ ಪ್ರಕಟಿಸ್ಯೊಳೊ. ಬನ್ನಿ ಓದೋಮ ತೇಳುವ ಅಂಕಣಲಿ ಕನ್ನಡದ ಕತೆಗಾರ, ಕಾದಂಬರಿಕಾರ, ಪ್ರಬಂಧಕಾರ ವಸುಧೇಂದ್ರವು ಬರ್ದ ಯುಗಾದಿ ಕಥಾ ಸಂಕಲನಂದ ಆಯಿದಾ ಕಥೆನ ಒಂದು ಕಂಡಿಕೆನ ಪ್ರಕಟಿಸ್ಯೊಳೊ. ತೆಕ್ಕಡೆ ಕುಮಾರಸ್ವಾಮಿನವು ನಮ್ಮ ಜೀವನದ ಮುಖ್ಯ ಆದ ವಸ್ತು ಮಣೆ ಮತ್ತೆ ಮುಕ್ಕಾಲ್‌ನ ಬಗ್ಗೆ ಮಾಹಿತಿನ ಈ ಸಂಚಿಕೆಲಿ ಕೊಟ್ಟೊಳೊ.

ಈ ಸಂಚಿಕೆಲಿ ಪ್ರಕಟ ಆದ ಬರವಣೆಗೆಗೆ ಚಿತ್ರಕಲಾವಿದ ಪ್ರಸನ್ನ ಐವರ್ನಾಡು ಇವು ಗೆರೆಗಳ ಮೂಲಕ ಜೀವ ತುಂಬ್ಯೊಳೊ. ಸಂಚಿಕೆನ ಹೊರತಾಕೆ ಅಕಾಡೆಮಿನ ಅಧ್ಯಕ್ಷರ್, ಸಹ ಸಂಪಾದಕರ್, ಸರ್ವ ಸದಸ್ಯರ್ ಮತ್ತೆ ರಿಜಿಸ್ಟ್ರಾರ್ ಸಹಕರಿಸ್ಯೊಳೊ. ಬರಹಗಾರರ್ ತಮ್ಮ ಅಮೂಲ್ಯವಾದ ಬರವಣೆಗೆಗಳನ್ನ ನೀಡಿ ಸಂಚಿಕೆನ ಮೆರ್‌ಗ್‌ನ ಜಾಸ್ತಿ ಮಾಡ್ಯೊಳೊ. ಪ್ರತಿ ತಿದ್ದುವಲ್ಲಿ ಸಂಪಾದಕ ಮಂಡಳಿನ ಸಹಸಂಪಾದಕರಾದ ಪುರುಷೋತ್ತಮ ಕಿರ್ಲಾಯವು, ವಿನೋದ್ ಮೂಡಗದ್ದೆ ಹಾಂಗೇ ಎಲ್ಲ ಸದಸ್ಯರ್‌ಗ ಕೈ ಜೋಡಿಸ್ಯೊಳೊ. ಆಕೃತಿ ಪ್ರಿಂಟ್ಸ್, ಮಂಗಳೂರು ಇವು ಲಾಯ್ಕಲಿ ಮುದ್ರಿಸಿ ಸಹಕರಿಸ್ಯೊಳೊ. ಸಂಚಿಕೆನ ಪ್ರಕಟಿಸಿಕೆ ಸಹಕರ್‌ಸಿದ ಎಲ್ಲವ್ಕೆ ಹೃದಯ ತುಂಬಿದ ಧನ್ಯವಾದಗಳ್‌ನ ಅರ್ಪಿಸಿನೆ.

ದಿನಾಂಕ: 30.09.2021

**ಡಾ. ದಯಾನಂದ ಕೂಡಕಂಡಿ**
ಸಂಪಾದಕರ್

| ಪ್ರಕಟ ಆದ ಬರವಣೆಗೆಗೆ ಆಯಾ ಬರಹಗಾರರೆ ಜವಾಬ್ದಾರರ್ |
|---|

# ಹಿಂಗಾರ ಒಡ್ಸ್‌ಕನ

**ನೈಜ ಕಥೆ**



**ಸ್ಪರ್ಧೆಲಿ ಬಹುಮಾನ ಪಡ್ದ ಅರೆಬಾಸೆ ಲಲಿತ ಪ್ರಬಂಧಗ**



**ಹರಟೆ ಮತ್ತ್ ಹಾಸ್ಯ**



**ಓದ್‌ಗರ ಅಭಿಪ್ರಾಯಗ**



**ಬನ್ನಿ ಓದೋಮ**



**ಕವನ**



**ಮುಖಪುಟ ಚಿತ್ರದ ಪರಿಚಯ**




# ಭಾರತದ ಮಹಿಳಾ ಹಾಕಿತಂಡದ ಸಹಾಯಕ ಕೋಚ್ – ಹೊನ್ನಂಪಾಡಿ ಅಂಕಿತಾ ಸುರೇಶ್

● **ಓಂಶ್ರೀ ದಯಾನಂದ, ಕೂಡಕಂಡಿ**

ಮೊಯಿಂಸಂಗೆ ಜೀವನಲಿ ಏನಾರ್ ಮಾಡೊಕುಂತ ಗುರಿ ಮತ್ತೆ ಹಟ ಇದ್ದರೆ ಖಂಡಿತ ಏನಾರ್ ಬೇಕಾದರ್ ಸಾದ್‌ಸಿ ತೋರ್ಸಕ್. ಒಮ್ಮೆಯಾರ್ ಒಲಂಪಿಕ್‌ಗೆ ಹೋಕುಂತ ಕನಸ್ಸ್ ಕಂಡ್, 2021ರ, ಜುಲೈ 23ರ್‌ಂದ ಅಗಸ್ಟ್ 8 ರ್ರವರೆಗೆ ಜಪಾನ್‌ನ ಟೋಕಿಯೋಲಿ ನಡ್ದ ಒಲಂಪಿಕ್‌ಲಿ ಭಾರತದ ಕೀರ್ತಿನ ಸಣ್ಣ ಪ್ರಾಯಲಿ ವಿಶ್ವ ಮಟ್ಟಕ್ಕೆ ಮುಟ್ಟಿಸಿದ ನಮ್ಮ ಜನಾಂಗದ ಹೆಮ್ಮೆನ ಮಗಳ್ ಸುಂಟಿಕೊಪ್ಪ ಹತ್ರದ ಕಂಬಿಬಾಣೆನ ಹೊನ್ನಂಪಾಡಿ ಅಂಕಿತಾ ಸುರೇಶ್. ಟೋಕಿಯೋ ಒಲಂಪಿಕ್ ಟೂರ್ನಿಲಿ ನಮ್ಮ ದೇಶದ ಹೆಣ್ಣ್ ಮಕ್ಕ ಹಾಕಿಲಿ ಬಾರಿ ಲಾಯ್ಕದ ಆಟ ಆಡ್ದೊ. ಪದಕನ ಗೆಲ್ಲಿಕೆ ಕಷ್ಟ ಆದರೂ ಪ್ರತಿಯೊಬ್ಬ ಭಾರತೀಯನ ಮನ್ಸ್‌ನ ಗೆದ್ದೊಳೊ. ಎಷ್ಟೋ ವರ್ಷಗ ಆದ ಮೇಲೆ ನಮ್ಮ ದೇಶದ ಹೆಣ್ಣ್ ಮಕ್ಕ ಹಾಕಿ ಆಟಲಿ ಸೆಮಿಫೈನಲ್‌ವರೆಗೆ ಹೋಕೆ ತರಬೇತಿ ಕೊಟ್ಟ






ತರಬೇತಿದಾರರಲ್ಲಿ ಹೊನ್ನಂಪಾಡಿ ಅಂಕಿತಾ ಸುರೇಶ್ ಕೂಡ ಒಬ್ಬಳ್ ಅಂತ್ ಹೇಳಿಕೆ ಹೆಮ್ಮೆ ಆದೆ.

ಹೊನ್ನಂಪಾಡಿ ಅಂಕಿತಾ ಸುರೇಶ್ ಡಿಸಂಬರ್ 12, 1992ರ್‌ಲಿ ಮಡಿಕೇರಿನ ನಿವಾಸಿಗ ಆದ ಸುರೇಶ್ ಮತ್ತ್ ಧರ್ಮಾವತಿ ದಂಪತಿಗಳ ಮಗ್‌ಳಾಗಿ ಹುಟ್ಟಿದೊ. ಇವು ಎಲ್.ಕೆ.ಜಿ ಮತ್ತ್ ಯು.ಕೆ.ಜಿನ ಸುಂಟಿಕೊಪ್ಪದ ಸೆಂಟ್ ಮೇರಿಸ್ ಶಾಲೆಲಿ, ಒಂದರ್‌ಂದ ಎಂಟನೇ ಕ್ಲಾಸ್‌ವರೆಗೆ ಮಡಿಕೇರಿನ ಜನರಲ್ ತಿಮ್ಮಯ್ಯ ಶಾಲೆಲಿ ಹಾಂಗೆ ಹೈಸ್ಕೂಲ್ ಮತ್ತ್ ಪದವಿ ಪೂರ್ವ ವ್ಯಾಸಂಗನ ಮಡಿಕೇರಿನ ಸರ್ಕಾರಿ ಪದವಿ ಪೂರ್ವ ಕಾಲೇಜ್‌ಲಿ ಮುಗ್‌ಸಿ, ಫೀಲ್ಡ್ ಮಾರ್ಷಲ್ ಕೆ.ಎಂ.ಕಾರ್ಯಪ್ಪ ಕಾಲೇಜ್‌ಂದ ಬಿ.ಕಾಂ ಪದವಿನ ಪ್ರಥಮ ದರ್ಜೆಲಿ ಪಡ್ಕೊಂಡೊಳೊ. 2014ರ್‌ಲಿ ಮಣಿಪಾಲ್ ಇನ್‌ಸ್ಟ್ಯೂಟ್‌ಂದ ಡಿಪ್ಲೊಮ ಇನ್ ಇ–ಫೈನಾನ್ಸ್, 2015ರ್‌ಲಿ ಅಣ್ಣಾಮಲೈ ವಿಶ್ವವಿದ್ಯಾಲಯಂದ ಪಿ.ಜಿ.ಡಿಪ್ಲೊಮ ಇನ್ ಜಿಮ್ ಇನ್‌ಸ್ಟ್ರಕ್ಟರ್ ಪದವಿನ ಮತ್ತ್ 2016ರ್‌ಲಿ ಅಣ್ಣಾಮಲೈ ವಿಶ್ವವಿದ್ಯಾಲಯಂದ ಪ್ರಥಮ ದರ್ಜೆಲಿ ಎಂ.ಕಾಂ ಸ್ನಾತಕೋತ್ತರ ಪದವಿನ ಪಡ್ದೊ. 2017ರ್‌ಲಿ ಬೆಂಗಳೂರ್‌ನ ನೇತಾಜಿ ಸುಭಾಷ್ ಸದರನ್ ಸೆಂಟರ್‌ಂದ ಡಿಪ್ಲೋಮ ಇನ್ ಸ್ಪೋರ್ಟ್ಸ್ ಕೋಚಿಂಗ್ ಪದವಿನ ಪಡ್ಕೊಂಡೊಳೊ.

**ಪಡ್ಕಂಡ ಹಾಕಿ ಕೋಚಿಂಗ್ ತರಬೇತಿಗ:**

ಅಂಕಿತಾ ಸುರೇಶ್‌ವು ಭಾರತದ ಮಹಿಳಾ ಹಾಕಿ ತಂಡದ ಸಹಾಯಕ ಕೋಚ್ ಅಕೆ ಇವು ಸಾಕಷ್ಟ್ ಕೋಚಿಂಗ್ ತರಬೇತಿನ ಸ ಪಡ್ಕೊಂಡೊಳೊ. 2018ರ್‌ಲಿ ಭುವನೇಶ್ವರಲಿ ಎಫ್.ಐ.ಹೆಚ್ ಹಾಕಿ ಅಕಾಡೆಮಿ ಲೆವೆಲ್–2 ಟೆಕ್ನಿಕಲ್ ಆಫೀಶಿಯಲ್ ಮತ್ತ್ ಆಂಧ್ರಪ್ರದೇಶಲಿ ಹಾಕಿ ಕ್ಲಿನಿಕ್ ಕೋಚಿಂಗ್ ತರಬೇತಿನ ಯಶಸ್ವಿ ಆಗಿ ಮುಗ್‌ಸ್ಯೊಳೊ. 2019ರ್‌ಲಿ ಎಫ್.ಐ.ಹೆಚ್ ಲೆವೆಲ್–1, ಎಫ್.ಐ.ಹೆಚ್ ಲೆವೆಲ್–2 ಮತ್ತ್ ಹಾಕಿ ಇಂಡಿಯಾ ಲೆವೆಲ್–2 ತರಬೇತಿನ ಭುವನೇಶ್ವರಲಿ ಮತ್ತ್ ಬೆಂಗಳೂರ್‌ಲಿ ಹಾಕಿ ಇಂಡಿಯಾ ಲೆವೆಲ್–1 ತರಬೇತಿನ ಪಡ್ಕೊಂಡೊಳೊ. 2020ರ್‌ಲಿ ಎಫ್.ಐ.ಹೆಚ್ ಗೋಲ್ ಕೀಪರ್ ಕೋರ್ಸ್‌ನ ಭುವನೇಶ್ವರಲಿ ಮುಗ್‌ಸ್ಯೊಳೊ.

**ಹಾಕಿ ಆಟಲಿ ಇವು ಮಾಡ್ದ ಸಾಧನೆಗ:**

ಅಂಕಿತಾ ಸುರೇಶ್‌ವು ಒಳ್ಳ ಹಾಕಿ ಆಟಗಾರ್ತಿ. ಇವು 2012 ಮತ್ತೆ 2013ರ್‌ಲಿ ಭೂಪಾಲ್‌ಲಿ ನಡ್ದ ಸೀನಿಯರ್ ನ್ಯಾಷನಲ್ಸ್ ಹಾಕಿ ಚಾಂಪಿಯನ್‌ಶಿಫ್‌ಲಿ, 2011ರ್‌ಲಿ ಹರ್ಯಾಣಲಿ ನಡ್ದ ಜೂನಿಯರ್ ನ್ಯಾಷನಲ್ಸ್ ಹಾಕಿ ಚಾಂಪಿಯನ್‌ಶಿಫ್‌ಲಿ ಭಾಗವಯಿಸಿ ಉತ್ತಮ ಪದರ್ಶನ ನೀಡಿ ಕ್ರೀಡಾಭಿಮಾನಿಗಳ ಮನ್ಸ್‌ನ ಗೆದ್ದೊಳೊ. 2011ರ್‌ಲಿ ಕರ್ನಾಟಕಲಿ ನಡ್ದ 56ನೇ ಐ.ಹೆಚ್.ಎಫ್ ಸೀನಿಯರ್ ವುಮೆನ್ಸ್ ನ್ಯಾಷನಲ್ ಹಾಕಿ ಚಾಂಪಿಯನ್‌ಶಿಫ್ ಪಂದ್ಯ ಮತ್ತೆ ಆಂಧ್ರಪ್ರದೇಶಲಿ ನಡ್ದ 5ನೇ ಸೌತ್ ಇಂಡಿಯಾ ನ್ಯಾಷನಲ್ಸ್ ಹಾಕಿ ಚಾಂಪಿಯನ್‌ಶಿಫ್ ಪಂದ್ಯಲಿ ಗೆದ್ದೊಳೊ. 2011ರ್‌ಲಿ ಕರ್ನಾಟಕಲಿ ನಡ್ದ ಆಲ್ ಇಂಡಿಯಾ ಇನ್ವಿಟೇಷನಲ್ ಹಾಕಿ ಟೂರ್ನಿಮೆಂಟ್ ಫಾರ್ ವುಮೇನ್ಸ್ ಹಾಕಿ ಪಂದ್ಯಾಟಲಿ ರನ್ನರ್ಸ್ ಸ್ಥಾನನ ಪಡ್ಕೊಂಡೊಳೊ. 2010–11ರ್‌ಲಿ ಇಂಡೋರ್, 2011–12ರ್‌ಲಿ ಉತ್ತರ ಪ್ರದೇಶಲಿ ಮತ್ತೆ 2012–13ರ್‌ಲಿ ರಾಜಸ್ಥಾನಲಿ ನಡ್ದ ಆಲ್ ಇಂಡಿಯಾ ಯುನಿವರ್ಸಿಟಿ ಹಾಕಿ ಪಂದ್ಯಾಟಲಿ ಹಾಕಿ ಆಟದ ಪ್ರೌಢಿಮೆನ ಮೆರ್‍ದೊಳೊ. 2011–12ರ್‌ಲಿ ತಮಿಳ್‌ನಾಡ್ ಮತ್ತೆ 2012–13ರ್‌ಲಿ ಕೇರಳಲಿ ನಡ್ದ ಸೌತ್ ಝೋನ್ ಇಂಟರ್ ಯುನಿವರ್ಸಿಟಿ ಟೂರ್ನಿಮೆಂಟ್‌ಲಿ ಗೆದ್ದೊಳೊ. 2010–11ರ್‌ಲಿ ಮಧ್ಯಪ್ರದೇಶಲಿ ನಡ್ದ ಸೌತ್ ವೆಸ್ಟ್ ಝೋನ್ ಇಂಟರ್ ಯುನಿವರ್ಸಿಟಿ ಟೂರ್ನಿಮೆಂಟ್‌ಲಿ ಭಾಗವಯಿಸಿ ಹಾಕಿಲಿ ಇವರ ಪ್ರಾಬಲ್ಯತನ ಮೆರ್‌ದೊಳೊ. 2010–11ರ್‌ಲಿ ಕರ್ನಾಟಕಲಿ ನಡ್ದ ಸೌತ್ ವೆಸ್ಟ್ ಝೋನ್ ಇಂಟರ್ ಯುನಿವರ್ಸಿಟಿ ಟೂರ್ನಮೆಂಟ್‌ಲಿ ಭಾಗವಹಿಸಿದೊ. 2010 ಮತ್ತೆ 2011ರ್‌ಲಿ ಕರ್ನಾಟಕಲಿ ನಡ್ದ ಸೌತ್ ಝೋನ್ ಇಂಟರ್ ಟೂರ್ನಮೆಂಟ್ ಫಾರ್ ಗರ್ಲ್ಸ್ ಪಂದ್ಯಲಿ ಭಾಗವಯಿಸಿ ಗೆದ್ದೊಳೊ. 2013ರ್‌ಲಿ ಕರ್ನಾಟಕಲಿ ನಡ್ದ ಕರ್ನಾಟಕ ಸ್ಟೇಟ್ ಹಾಕಿ ಅಸೋಸಿಯನ್ ಪಂದ್ಯಲಿ ಭಾಗವಯಿಸಿ ಗೆದ್ದೊಳೊ. 2009–10ರ್‌ಲಿ ಹರ್ಯಾಣದ ಸೋನಿಪಟ್‌ಲಿ ನಡ್ದ 55ನೇ ನ್ಯಾಷನಲ್ ಸ್ಕೂಲ್ ಗೇಮ್ಸ್‌ಲಿ ಮೂರನೇ ಸ್ಥಾನ ಪಡ್‌ಕೊಂಡೊಳೊ.

**ಅಥ್ಲೆಟಿಕ್ಸ್‌ಲಿ ಇವು ಮಾಡ್ದ ಸಾಧನೆಗ:**

ಅಂಕಿತಾ ಸುರೇಶ್‌ವು ಹಾಕಿ ಆಟ ಮತ್ತೆ ಕೋಚಿಂಗ್ ಜೊತೆಲಿ

ಒಳ್ಳೆ ಅಥ್ಲೇಟ್ ಸ ಹೌದು. 2009ರ್‌ಲಿ ಕೇರಳದ ಎರ್ನಾಕುಲಂಲಿ ನಡ್ದ 54ನೇ ನ್ಯಾಷನಲ್ ಸ್ಕೂಲ್ ಗೇಮ್ಸ್‌ಲಿ 5000 ಮೀಟರ್ ಓಟಲಿ  ಮತ್ತೆ ಅದೇ ವರ್ಷ ಪಂಜಾಬ್‌ನ ಅಮೃತಸರಲಿ ನಡ್ದ 55ನೇ ನ್ಯಾಷನಲ್ ಸ್ಕೂಲ್ ಗೇಮ್ಸ್‌ಲಿ 3000 ಮೀಟರ್ ಓಟಲಿ ಹಾಂಗೇ 2009–10ರ್‌ಲಿ ಕರ್ನಾಟಕದ ಹಳಿಯಾಳಲಿ ನಡ್ದ ಕರ್ನಾಟಕ ಸ್ಟೇಟ್ ಪ್ರೀ ಯುನಿವರ್ಸಿಟಿ ಅಥ್ಲೇಟಿಕ್ ಮೀಟ್‌ನ 3000 ಮೀಟರ್ ಓಟಲಿ ಭಾಗವಹಿಸ್ಯೊಳೊ. 2009ರ್‌ಲಿ ಬೆಂಗಳೂರ್‌ಲಿ ನಡ್ದ 21ನೇ ಕರ್ನಾಟಕ ಸ್ಟೇಟ್ ಜೂನಿಯರ ಮತ್ತೆ ಸೀನಿಯರ್ ಅಥ್ಲೇಟಿಕ್ಸ್ ಚಾಂಪಿಯನ್‌ಶಿಫ್‌ಲಿ 5000 ಮೀಟರ್ ಓಟಲಿ ಎರಡ್ನೆ ಸ್ಥಾನ ಪಡ್‌ಕೊಂಡೊಳೊ. ಕರ್ನಾಟಕದ ಹಳಿಯಾಳಲಿ 2009ರ್‌ಲಿ ನಡ್ದ ಪ್ರೀ ಯುನಿವರ್ಸಿಟಿ ಸ್ಟೇಟ್ ಲೇವೆಲ್ ಅಥ್ಲೇಟಿಕ್ಸ್ ಚಾಂಪಿಯನ್‌ಶಿಫ್‌ಲಿ 5000 ಮೀಟರ್ ಓಟಲಿ ಎರಡ್ನೆ ಸ್ಥಾನ ಪಡ್‌ಕೊಂಡೊಳೊ. 2008ರ್‌ಲಿ ಮಂಗಳೂರಲಿ ನಡ್ದ ಪ್ರೀ ಯುನಿವರ್ಸಿಟಿ ಸ್ಟೇಟ್ ಲೇವೆಲ್ ಅಥ್ಲೇಟಿಕ್ಸ್ ಚಾಂಪಿಯನ್‌ಶಿಫ್‌ಲಿ 3000ಮೀಟರ್ ಓಟಲಿ ಎರಡ್ನೆ ಸ್ಥಾನ ಪಡ್‌ಕೊಂಡೊಳೊ ಹಾಂಗೆ 2007ರ್‌ಲಿ ಮೈಸೂರ್‌ಲಿ ನಡ್ದ ಕರ್ನಾಟಕ ಸ್ಟೇಟ್ ಜೂನಿಯರ್ ಅಥ್ಲೇಟಿಕ್ಸ್ ಚಾಂಪಿಯನ್‌ಶಿಫ್‌ಲಿ 3000 ಮೀಟರ್ ಓಟಲಿ ಭಾಗವಯಿಸಿ ಒಳ್ಳೆ ಸಾಧನೆ ಮಾಡ್ಯೊಳೊ.

**ಅಂಪೈರ್ ಆಗಿ ಮಾಡ್ದ ಸಾಧನೆಗ:**

ಅಂಕಿತಾ ಸುರೇಶ್‌ವು ಬರಿ ಆಟಗಾರ್ತಿ, ಕೋಚ್, ಅಥ್ಲೇಟ್ ಅಲ್ಲದೆ ಸುಮಾರ್ ಸಲ ಹಾಕಿ ಪಂದ್ಯಾವಳಿಲಿ ಅಂಪೈರ್ ಆಗಿ ಸ ಒಳ್ಳೆ ಸಾಧನೆ ಮಾಡ್ಯೊಳೊ. 2017 ಮತ್ತೆ 2018ರ್‌ಲಿ ಹಾಕಿ ಕರ್ನಾಟಕ ಲೀಗ್–1 ಮ್ಯಾಚ್‌ನ ಅಂಪೈರ್ ಆಗಿದ್ದೊ. 2016, 2017 ಮತ್ತೆ 2018ರ್‌ಲಿ ಹಾಕಿ ಕರ್ನಾಟಕ ಇಂಟರ್ ಸ್ಕೂಲ್ ಟೂರ್ನಿಮೆಂಟ್‌ಲಿ ಅಂಪೈರ್ ಆಗಿ ಕೆಲ್ಸ ಮಾಡ್ಯೊಳೊ. 2018ರ್‌ಲಿ ಚರಂಜೀತ್ ರೈ–25 ನೆಹರೂ ಗರ್ಲ್ ಹಾಕಿ ಟೂರ್ನಿಮೆಂಟ್‌ನ ಅಂಪೈರ್ ಆಗಿ, 2019ರ್‌ಲಿ ಆಲ್ ಇಂಡಿಯಾ ಇನ್ವೈಟೇಷನಲ್ ಪ್ರೈಜ್ ಮನಿ ವುಮೆನ್ಸ್ ಹಾಕಿ ಟೂರ್ನಿಮೆಂಟ್‌ನ ಟೆಕ್ನಿಕಲ್ ಆಫೀಸರ್ ಆಗಿದ್ದೊ. ಹಿಂಗೆ ಬೇರೆ ಬೇರೆ ಮಟ್ಟದ ಹಾಕಿ ಪಂದ್ಯಾವಳಿನ ಅಂಪೈರ್ ಆಗಿ  ಗುರ್‌ತಿಸಿಕೊಂಡೊಳೊ.

**ಇವು ಪಡ್ಕಂಡ ಗೌರವ, ಸನ್ಮಾನ, ಪುರಸ್ಕಾರ, ಪ್ರಶಸ್ತಿಗ:**

2021ರ, ಜುಲೈ 23ರ್ಂದ ಅಗಸ್ಟ್ 8ರ್ರವರೆಗೆ ಜಪಾನ್‌ನ ಟೋಕಿಯೋಲಿ ನಡ್ದ ಒಲಂಪಿಕ್‌ಲಿ ಭಾರತದ ಕೀರ್ತಿನ ಸಣ್ಣ ಪ್ರಾಯಲಿ ವಿಶ್ವ ಮಟ್ಟಕ್ಕೆ ಮುಟ್ಟಿಸಿ, ದೇಶದ ಹೆಣ್ಣ್ ಮಕ್ಕ ಒಲಂಪಿಕ್ ಹಾಕಿ ಆಟಲಿ ಸೆಮಿಫೈನಲ್‌ವರೆಗೆ ಹೋಕೆ ತರಬೇತಿ ಕೊಟ್ಟ ತರಬೇತಿದಾರ ಹೊನ್ನಂಪಾಡಿ ಅಂಕಿತಾ ಸುರೇಶ್‌ವು ನಮ್ಮ ದೇಶದ ರಾಷ್ಟ್ರಪತಿ ರಾಮನಾಥ ಕೋವಿಂದ್, ಪ್ರಧಾನ ಮಂತ್ರಿ ನರೇಂದ್ರ ಮೋದಿ, ಕರ್ನಾಟಕ ರಾಜ್ಯದ ರಾಜ್ಯಪಾಲ ಥಾವರ್ ಚಂದ್ ಗೆಹ್ಲೋಟ್, ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ, ಆದಿಚುಂಚನಗಿರಿ ಮಠದ ನಿರ್ಮಲಾನಂದ ಸ್ವಾಮೀಜಿ, ಉತ್ತರ ಪ್ರದೇಶದ ಮುಖ್ಯಮಂತ್ರಿ ಯೋಗಿ ಆದಿತ್ಯನಾಥ, ಒರಿಸ್ಸಾ ರಾಜ್ಯದ ಮುಖ್ಯಮಂತ್ರಿ ನವೀನ್ ಪಟ್ನಾಯಕ್, ಇಂಡಿಯಾನ್ ಒಲಂಪಿಕ್ ಅಸೋಸಿಯೇಷನ್, ವಿರಾಜಪೇಟೆ ವಿಧಾನ ಸಭಾ ಕ್ಷೇತ್ರದ ಶಾಸಕರ್ ಕೊಂಬಾರನ ಬೋಪಯ್ಯ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಬೆಂಗಳೂರು ಗೌಡ ಸಮಾಜ, ಕುಶಾಲನಗರ ಗೌಡ ಸಮಾಜ ಹೀಂಗೆ ಬೇರೆ ಬೇರೆ ಸಂಘ ಸಂಸ್ಥೆಗಳ್‌ಂದ ಗೌರವ, ಸನ್ಮಾನ, ಪುರಸ್ಕಾರ, ಪ್ರಶಸ್ತಿಗಳನ್ನ ಪಡ್ಕೊಂಡೊಳೊ.

ಅಂಕಿತಾ ಸುರೇಶ್‌ವು ಒಳ್ಳೆ ಆಟಗಾರ್ತಿ, ಕೋಚ್, ಅಂಪೈರ್, ಅಥ್ಲೆಟ್ ಅಷ್ಟೆ ಅಲ್ಲದೆ ಓದುಲಿ ಸ ಮುಂದೆ ಇದ್ದ್ ಬಾರಿ ಸಣ್ಣ ಪ್ರಾಯಲಿ ನಮ್ಮ ಜನಾಂಗದ ಕೀರ್ತಿನ ವಿಶ್ವ ಮಟ್ಟಕ್ಕೆ ಮುಟ್ಟುಸಿದ ಸಾಧಕಿ. ಕುಲದೇವರ್ ವೆಂಕಟರಮಣ ಸ್ವಾಮಿ ಇವುಕೆ ಇನ್ನ್ ಹೆಚ್ಚಿನ ಸಾಧನೆ ಮಾಡಿಕೆ ಆರೋಗ್ಯ, ಆಯುಷ, ಐಶ್ವರ್ಯ, ಸುಖ–ಶಾಂತಿ, ನೆಮ್ಮದಿನ ಕೊಟ್ಟ್ ಇನ್ನ್ ಹೆಚ್ಚ್‌ನ ಸಾಧನೆ ಮಾಡಿಕೆ ಎಲ್ಲಾ ಶಕ್ತಿನ ನೀಡಿ ಹರ್‌ಸಲಿ ತ ಬೇಡಿಕಂಬೊನ.

**ಶ್ರೀಮತಿ ಓಂಶ್ರೀ ದಯಾನಂದ**
ಕೂಡಕಂಡಿ ಮನೆ, ಭಾಗಮಂಡಲ
ಮೊಬೈಲ್ ಸಂಖ್ಯೆ : 6363376487




# ಅರೆಬಾಸೆ ಚುಟುಕ್‌ಗ

● **ಜೀವನ್ ಪುರ**

ಜನಪದ ಸಾಹಿತ್ಯ ನಿಜಕ್ಕೂ ನಮ್ಮ ಶ್ರೀಮಂತ ಸಂಸ್ಕೃತಿ ನ ಒಂದು ವಿಶೇಷ ಭಾಗ.ಅದ್ ಹಿಂದೆ ಬಾಳಿ ಬೊದ್ಕಿದ ಹಿರಿಯರ ಪಂಡ್‌ನ ಅನುಭವದ ಒಂದು ದೊಡ್ಡ ಗುರ್ತ. ಯಾವುದೇ ಬಾಸೆಲಿ ಅದರ ಸಿರಿತನ ಗೊತ್ತಾದು ಅದ್ರ ಜನಪದ ಸಾಹಿತ್ಯದ ಹಿನ್ನೆಲೆಲಿ ನೋಡ್ಕನ, ಏಕೆಂತೇಳ್ರೆ ಅದ್ ಮೂಲ ಸಾಹಿತ್ಯಂತ ಹೇಳಕ್. ಹಾಂಗಾಗಿ ಅದುವೇ ಮುಂದೆನ ಸಾಹಿತ್ಯದ ಗಟ್ಟಿ ಬುಡ.

ಹಂಗೆನೇ ಅರೆಬಾಸೆಲಿ ಕೂಡ ಜನಪದ ಸಾಹಿತ್ಯಲಿ ಸುಮಾರ್ ರೀತಿನ ಜಾನಪದ ಬಗೆಗಳ ನೋಡಕ್. ಅದ್ ಗಾದೆ ಆಗಿರ್ದೂ, ಸೋಬಾನೆ, ಮಕ್ಕಳ ಪದ್ಯ, ಕತೆ, ನೇಜಿ ಕತೆ ಮತ್ತೇ ಪದ್ಯ, ತಮಾಸೆನ ಚುಟುಕುಗ ಹೀಂಗೆ ಸುಮಾರ್ ಪಟ್ಟಿ ಮಾಡಕ್. ಇದರ್ಲಿ ಚುಟುಕುಗ ಸಣ್ಣ ಮಟ್ಟ್‌ನ ಪದ್ಯಗ (ಆಶು ಕವಿತೆ). ಹಿಂದೆ ಬೇಕಾದಾಷ್ಟ್ ಬಳಕೆಲಿ ಇತ್ತ್. ಆದರೆ ಇಂದ್ ನ ಹೊಸ ಸಾಹಿತ್ಯ ದ ನೊಡುಲಿ ಅದ್ ಮೂಲೆಗೆ ಹೋಗ್ತಾ ಉಟ್ಟು. ಅಂತ ಚುಟುಕುಗ ಬೇರೆ ಬೇರೆ ಬಗೆಲಿ ಉಟ್ಟು. ಸಣ್ಣ ಮಕ್ಕಳಿಗೆ, ದೊಡ್ಡ ಮಕ್ಕಳಿಗೆ, ಹೈದಂಗಳಿಗೆ, ಮೊದುಮಕ್ಕಳಿಗೆ, ದನ ಕರ್ ಗಳಿಗೆ, ಕೊತ್ತಿ ನಾಯಿಗೆ, ಜಾಗೆ ಜಮ್ಮಕ್ಕೆ, ಮೊದುವೆ, ಸಾವು, ಕೃಸಿ, ಬೇಸಾಯ ಹೀಂಗೆ ಎಲ್ಲಾದಕ್ಕೂ ಸಂಬಂದಪಟ್ಟಂಗೆ ಕುಸ್ಸಾಲ್, ಬೆಚ್ಚ ಮತ್ತೆ ಬುದ್ದಿವಾದ ಹೇಳುವಂತ ಚುಟುಕಗ ಒಳೋ. ಆದರೆ ಇಂದ್ನವು ಮರ್ತ್ ಬುಟ್ಟದಕ್ಕೆ ಪಂಡ್ ನವರೊಟ್ಟಿಗೆ ಅದ್ ಅಳ್ದುಟು. ಬೆಟ್ಟೆ ಮಾತಾಡ್ದು, ಪೆದಂಬು,ಅಶ್ಲೀಲತೆ ಕೂಡ ಉಟ್ಟು. ಆದರೆ ಅದರ್ಲಿ ಕೆಲವು ಚುಟುಕುಗಳ ಹೆಕ್ಕಿ ಅದರ ಬಗ್ಗೆ ನಾಕ್ ಬರೆವ ಪ್ರಯತ್ನ ಇಲ್ಲಿ ಸಣ್ಣ ಪ್ರಯತ್ನಮಾಡ್ಯಳೆ.

**ಸಣ್ಣ ಮಕ್ಕಳಿಗೆ:**

ಕಾಲಾಡ್ ಕಪ್ಪೆ ಕಾಲಾಡ್<br>
ನೀರಿಗೆ ಬಿದ್ದರೆ ತೇಲಾಡ್

ಗುಡ್ಡೆಗೆ ಬಿದ್ದರೆ ಹಾರಾಡ್
ಕಾಲಾಡ್ ಕಪ್ಪೆ ಕಾಲಾಡ್

ಇಲ್ಲಿ ಸಣ್ಣ ಪ್ರಾಯದ ಎದ್ದ್ ಬಿದ್ದ್ ನಡೆವ ಮಕ್ಕಳ, ಮನೆ ಚಿಂಟೆ, ಕುರ್ಸಿ ಇಲ್ಲರೆ ಯಾವುದಾದ್ರ್ ಎತ್ತರದ ಜಾಗೆಲಿ ಕುದ್ದ್ ದ್, ಕಾಲ್ ನ ಕೆಳಗೆ ಹಾಕಿ ಪಾದದ ಮೇಲೆ ಕೂಸುನ ನಿಲ್ಸಿ, ಕೂಸುನ ಎರ್ಡ್ ಕೈನ ಹಿಡ್ಕಂಡ್ ಕಾಲಾಡಿಸಿಕಂಡ್ ಹೆಚ್ಚಾಗಿ ಇದರ ಅಜ್ಜಿಕ ಅಜ್ಜಂದರ್, ಅಪ್ಪ ಚಿಕ್ಕಪ್ಪಂದರ್ ಮಕ್ಕಳ ಆಟ ಆಡ್ಸ್‌ಕನ ಹೇಳುವೆ. ಇಲ್ಲಿ ಮಕ್ಕ ಆಗ ತಾನೇ ಮಾತ್ ಕಲೆವ ಕಾರಣಕ್ಕೆ ಒಂದು ರೀತಿನ (ಶಿಶು ಪ್ರಾಸ ಪದ) ಮಾತ್ ಕಲ್ಸುವ ಪದ್ಯ ಅಂತಾನೂ ಹೇಳಕ್. ಹಾಂಗೆ ಕಾಲ್ ಲಿ ಕುದ್ರುಸಿ ಆಟ ಆಡ್ಸುದ್ರಂದ ಮಕ್ಕಳಿಗೆ ಸಣ್ಣ ಮಟ್ಟ್ ನ ವ್ಯಾಯಾಮ ಕೂಡ ಆದೆ.

ಡಾಕ್ ಡೂಕ್ ಡಗಾರಿಕಂಡೆ
ಹುಲಿಮೀಸೆ ರಕ್ಕಸಿ
ರಕ್ಕಸಿನಜ್ಜಿ ರಟ್ಟೆ ಮುರಡಣ
ಗರಡನಾ ತೂಗೋಣ

ಇದ್ ಬಾಸೆಗೆ ಪ್ರಾಸ ಇರುವಂಗೆ ಇದ್ದರೂ ಮಕ್ಕಳಿಗೆ ಹೆದ್ರುಸುವ ಹಾಂಗೆ ಕಂಡರೂ ಅದರ ಸಮಾಧಾನ ಮಾಡಿ ನಿಲ್ಲುಸುವ ಉಣ್ಸುವ ಹಾಂಗೆ ತೊಟ್ಟಿಲ್ ತೂಗುವ ಹೊತ್ತಿಗೆ ಅಜ್ಜಿಕ ಹೇಳ್ತಿದ್ದೋ. ಇಲ್ಲಿ ಪದದ ಉಚ್ಚಾರ ಇನ್ನೂ ಸ್ಪಷ್ಟವಾಗಿ ಸಿಕ್ಕಿತ್ಲೆ. ಹಾಂಗಾಗಿ ಪೂರ್ತಿ ಅರ್ತ ಮಾಡಿಕಂಕೆ ಕಷ್ಟ ಆದೆ.

**ದೊಡ್ಡ ಮಕ್ಕಳಿಗೆ:**

ಅಪ್ಪಂಗೆ ಜರ
ಅವ್ವನ್ಗೆ ಕುರ
ನಂಗೆಮ್ಮೆ ಪಾರ
ಚಾಂಪಂಗೆ ದನಪಾರ
ಚಾಮವ್ವಂಗೆ ಮಕ್ಕಳ ಪಾರ
ನೀವ್ಗೆಲ್ಲಾ ಸಸಾರ

ಹಿಂದೆಲ್ಲ ಮನೆ ದೊಡ್ಡ ಮಕ್ಕ ದನ ಮೇಸುದು ಮಾಮೂಲು. ಹಾಂಗೆ ಇಲ್ಲಿ ಮನೆಲಿರುವ ಒಬ್ಬೊಬ್ಬನ ಕೆಲ್ಸ ಹೆಂಗೆ ಹಂಚಿ ಹೋವುಟು ಅಂತ ನೋಡಕ್. ಒಟ್ಟಿಗೆ ಅವ್ವ ಅಪ್ಪಂಗೆ ಉಸಾರ್ ಇತ್ಲಾರ್ ಮನೆ ದೊಡ್ಡ ಮಕ್ಕಳಿಗೆ ಆ ಕೆಲ್ಸ ಮಾಡುವ ಪರಿಸ್ಥಿತಿಲಿ ಸಣ್ಣವ್ಕೆ ಇದೆಲ್ಲ ಸಸಾರ ಅಂತ

ಹೇಳುವ ರೀತಿಲಿ ಉಟ್ಟು.

ಸಗಣಿ ಕಟ್ಟೆ ಕಟ್ಟಿ
ಪೊವ್ವ ಕುಪ್ಪ ಹಾಕಿ
ಹಾಲ್ ಬೋನ ಉಂಡ್
ಮಾಮನೆಗೆ ನಡಿಮಂಜ ಮುಂದೆ ಮುಂದೆ
ನಾಬನ್ನೆ ನಿನ್ನ ಬೆನ್ನಿ ಹಿಂದೆ..

ಮಕ್ಕ ಹಂಞ ದೊಡ್ಡದಾಕನ ಅಯ್ಯೆ ತವರು ಮನೆಗೆ ಅಂದರೆ ಮಕ್ಕಳ ಮಾಮನೆಗೆ ನಡ್ದ್ ಹೋದರ ಹೇಳ್ದ್. ನಡ್ದ್ ಹೋಕನ ಬೊಚ್ಚೆಲ್ ಹೋಕೆ, ದಾರಿ ಸ್ನಾಗಿಕೆ ಇಂತದ್ದೇ ಪದ್ಯಗಳ ಕಟ್ಟಿಕಂಡ್ ಹೇಳಿಕಂಡ್ ಹೋತಿದ್ದೋ ಅಂತ ಹಿರಿಯವು ಹೇಳ್ವೆ.

**ಹುಡ್ಗರ್ (ಬಾವಂದರ್, ಅತ್ತಿಗೆ ನಾದಿನಿಕ):**

ಅತ್ತಿ ಮರ ನೋಡಿಕೆ ಲಾಯ್ಕ್
ಅತ್ತಿಗೆ ತಂಗೆ ನೋಡಿಕೆ ಲಾಯ್ಕ್
ಅತ್ತೆನ ಮಗ್ಳ್ ಅಮ್ಮಣಿ ಗೂಡೆ
ನೋಡಿಕೆ ಇನ್ನೂ ಲಾಯ್ಕ್ .!
ಮಾಯಿನ ಮರ ಲಾಯ್ಕ್
ಮಾಯಿನ ಹಣ್ಣ್ ಲಾಯ್ಕ್
ಮಾಂವನ ಮಂಜ ಮೇದಪ್ಪ ಹೈದ
ನೋಡಿಕೆ ಇನ್ನೂ ಲಾಯ್ಕ್ !

ಇಲ್ಲಿ ಸೋದರರದ ಸಂಬಂದದೊಟ್ಟಿಗೆ ಸಂಬಂದ ಬೆಳ್ಸುವ ರೀತಿಲಿ ಕುಸಾಲ್ ಮಾಡ್ದು, ಅವರ ಪೊರ್ಲ್ ನ ಮರ ಮತ್ತೆ ಹಣ್ಣ್ ನ ಹಿನ್ನೆಲೆಲಿ ಹೊಗುಳ್ದು ಕಂಡದೆ. ಇಲ್ಲಿ ಚೂರು ಮೂಲ ಪದ್ಯದ ರೂಪಲಿ ಸಣ್ಣ ಬದಲಾವಣೆ ಆಗಿರುವ ಸಾದ್ಯತೆ ಕೂಡ ಇರ್ದು ಕಂಡದೆ. ಸುಮಾರ್ ಪದ್ಯಗ ಒಂದು ಭಾಗಂದ ಇನ್ನೊಂದು ಭಾಗಕ್ಕೆ ಹೋಕನ ಸುಮಾರ್ ಬದ್ಲಾವುಟು. ಹಾಂಗೆ ಇಲ್ಲಿ ಕೂಡ ಪದ ವಸ್ತು ಬದ್ಲಾಗುಟು ಅನ್ಸಿದೆ.

ಹಪ್ಪಿ ಮೂಂಗೂ.. ಚಪ್ಪರ ತಲೆ
ದೊಗ್ಗಳೆ ದೊಳ್ಳಕ್ಕ
ಬಾವನ ದೊಡ್ಡಕ್ಕ .

ಸಂಬಂದಲಿ ರೂಪನ ತಮಾಸೆ ಮಾಡುವ ಕುಸಾಲ್ ನ ಸಣ್ಣ ಪದ್ಯ ಇದ್. ಇದ್ ತಮಾಸೆನೂ ಆಗಿರ್ದು ಮತ್ತೆ ಸಿಟ್ಲಿ ಕೂಡ ಹೇಳ್ದಂಗೆ

ಉಟ್ಟು. ಹಾಂಗಾಗಿ ಇದರ ಬೊಯ್ಗ್ಳದ ದೃಸ್ಟಿಲಿ ಕೂಡ ನೋಡಕ್. ಇನ್ನೊಂದು ಪದ್ಯ ಗಂಡ್ಸರ ರೂಪದ ಬಗ್ಗೆ ಉಟ್ಟು.

ಹೊಟ್ಟೆ ಡುಮ್ಮಣ್ಣ
ಕೈಕಾಲ್ ಸಣ್ಣಣ್ಣ
ಬೊಕ್ಕ್ ಬಾಯಿ ದೊಡ್ಡಣ್ಣ
ಹರ್ಕ್ಲ್ ಬಾಯಿ ಕುಂಞಣ್ಣ..

ಹಿಂಗೆ ಸರ್ಗದ ಬಾಗ ಮತ್ತೆ ರೂಪದ ಬಗ್ಗೆ ಕೂಡ ಬೇರೆ ಬೇರೆ ಪದ್ಯಗ ಹುಡ್ಕಿರೆ ಸಿಕ್ಕುವೋ.

ಜಾಗೆ ಜಮ್ಮದ ಬಗ್ಗೆನೂ ಸಂಬಂದಲಿ ಕುಸಾಲ್ ಮಾಡುವ ಪದ್ಯ ಒಂದು ಹಿಂಗುಟ್ಟು.

ಹಳ್ಳದಕರೆ ಬೂಮಿ
ಬರೆಕರೆ ಮನೆ
ಕೂರಟು ನೇಗ್ಲ್
ಬಡ್ಕಲ್ ಎತ್ತ್
ಯಾರಿಗೆ ಕಮ್ಮಿ ನಮ್ಮಳಿಯ
ಇಂವ ನಮ್ಮ ಮನೆ ತೊಳಿಯ..

ಅಳಿಯನ ಬಗ್ಗೆ ಹೊಗ್ಳಿ, ಇಂತಾ ಅಳಿಯ ನಾವ್ಗೆ ಸಿಕ್ಕಿತ್ ಅಂತೆಳುವ ಹಮ್ಮು ನು ಉಟ್ಟು ಈ ಪದ್ಯಲಿ.

**ಮೊದುವೆ ಜಂಬರದ ಬಗ್ಗೆ:**

ನೇರಳೆ ಹಣ್ಣಾತ್
ಅಣ್ಣಂಗೆ ಹೆಣ್ಣಾತ್
ಮಲ್ಲಿಗೆ ಹೂವಾತ್
ಮಳ್ಳಿ ಗೆ ಗಂಡಾತ್
ಹೆಣ್ಣ್ ತಂದಾತ್
ದಿಬ್ಬಣ ಹೋಗ್ಯಾತ್

ನೇರಳೆ ಹಣ್ಣಾದು ಜಾಸ್ತೆ ಮತ್ತು ಪೆರ್ಗಾಳ್ತೆ ತಿಂಗಾಳ್‌ಲಿ ಅಂದರೆ ಮಳೆಗಾಲ ಕಳ್ದ್ ಸಳಿಗಾಲ ಸುರು ಆಗುವ ತಿಂಗ ಮೊದುವೆ ಸಂಬಂದ ಹುಡ್ಕಿಕೆ ಅದ್ ಒಳ್ಳ ಹೊತ್ತದ್. ಹಾಂಗೆ ಮೊದುಮಗಳಿಗೆ ಮಲ್ಲಿಗೆ ಹೂವು ಬೇಕೇ ಬೇಕು. ಹೂವಾಗುವ ಹೊತ್ತಿಗೆ ಗೂಡೆಗೆ ಮೊದುವೆ ಆದ ಬಗ್ಗೆ ಇಲ್ಲಿ ತಿಳ್ಕಣಕ್. ಒಟ್ಟಿಗೆ ಹೂವು ಮೊದುವೆಲಿ ಎಷ್ಟ್ ಮುಖ್ಯ ಅಂತಾನೂ ನೋಡಕ್.

ಕೊಟ್ಟ್ ಕತ್ತಿ ಬಾಣೆಲಿ
ಕೊಂಬೋಲಗ ಕೇಳ್ದೆ
ಮರ್ದ್ಬಡ ನೀ ಕುಂಞಂಕ್ಕ
ದಬ್ಬಡ್ಕ ಬಾಣೆಲಿ ದಿಬ್ಬಣಬಂದುಟು
ಮರ್ದ್ಬಡ ನೀ ಸಣ್ಣಂಕ್ಕ .

ಮೊದುವೆ ಆಕನ ಗೂಡೆಗಾ ಮರ್ದ್‌ದು ಸಾಮಾನ್ಯ. ಅದರ್ನೇ ಕುಸಾಲ್‌ನ ಪದ್ಯ ಕಟ್ಟಿದ್ ತಮಾಸೆ ಮಾಡ್ವೆ ಈ ಪದ್ಯಲಿ. ಹುಡ್ಕಿರೆ ಇನ್ನಾಸ್ ಇಂತ ಪದ್ಯಗ ಸಿಕ್ಕುವೋ.

**ಸಂತೆ ಜಾತ್ರೆಲಿ:**

ಎಸ್‌ಂಡ್ ತುಪ್ಪ ಪೂಜ್ಯಳೆ
ಮಲ್ಲಿಗೆ ಹೂವು ಮುಡ್ದಳೆ
ಊರ್ ಗೌಡ್ರ ಮಂಜ ನನ್ನನೇ ನೋಡ್ದೆ.

ಊರುಲಿ ಗೂಡೆಗ ಸಂತೆ, ಜಾತ್ರೆ ತಿರ್ಗಿಕೆ ಹೋಕನ ಆಗನ ಕಾಲದ ಸಾಮಾಜಿಕ ಸ್ಥಿತಿಗತಿಗೆ ಊರ್ನ ಜಮೀನ್ದಾರ, ಊರುಗೌಡ್ರ ಮಕ್ಕ ಮೊದುವೆಗೆ ಗೂಡೆ ನೋಡ್ದು ಸಾಮಾನ್ಯ ಆಗಿತ್ ಕಂಡದೆ. ಇಲ್ಲಿ ಪರಿಮಳಕ್ಕೆ ಮಲ್ಲಿಗೆ ಮತ್ತೆ ಎಸ್‌ಂಡ್ ತುಪ್ಪದ ಹೋಲಿಕೆನ ಕೂಡ ನಾವು ನೋಡಕಾದೆ.

**ದಾಸಯ್ಯನ ಬಗ್ಗೆ**

ದಾಸಯ್ಯ ಬಾತ್
ದೋಸೆ ತಿಂತ್
ನೀರ್ ಕುಡ್ತ್
ನೆಗ್ದ್ ಬೀತ್..

ಮಕ್ಕ ದಾಸಯ್ಯ ಬಾಕನ ಅವನ ಸುತ್ತ ಓಡಿ ಹೋಗಿ ಸೇರ್ದು ಆಗೆಲ್ಲ ಒಂದು ಕುಸಿನ ವಿಸಯ. ಹಂಗೆ ಬಂದ ದಾಸಯ್ಯನ ಡೋಂಗಿ ಮಾಡಿಕೆ ಹುಟ್ಟಿಕಂಡ ಮಕ್ಕಳ ಪದ್ಯ ಇದಾಗಿರ್ದು.

**ಸಂಸಾರ–ಕೃಷಿ–ಬೊದ್ಕು**

ನಾನ್ ನೀನ್ ಸೇರಲಾಗಿ
ಗೋಣಿಕೊಪ್ಪಕ್ಕೆ ಹೋಗಲಾಗಿ

ಮುದಿಯೆತ್ತ್ ತರಲಾಗಿ
ಹಡ್ಲ್ ಬೂಮಿ ಹೂಡಲಾಗಿ
ಗೋಳೋ ಗೋಳಣ್ಣಾ ..

ನೆರೆಕರೆ ದೋಸ್ತಿಗ ಸೇರಿ ಕೃಸಿ ಮಾಡ್ದು ಹಿಂದೆಂದಲೂ ಇತ್ತ್. ಸುರು ಸುರು ಕ್ರುಸಿ ಮಾಡೋವು ಬಂದ ಬಂಜ ಮತ್ತೆ ಅನುಬವದ ಕೊರ್ತೆ ಈ ಪದ್ಯಲುಟ್ಟು.

ಈ ವರ್ಸ ಮಳೆಗಾಲ ಬಾಳ
ನಮ್ಮಪ್ಪ ಒಲೆ ಬುಡದಿಂದೇಳ
ಸಾಲ ಕೊಟ್ಟವೆಲ್ಲಾ ಬನ್ನಿ
ನಮ್ಮಂಗಳ ಮೊಣ್ಣೆ ತಿನ್ನೀ..

ಇಲ್ಲಿ ಕೂಡ ಮಳೆ ಜಾಸ್ತಿ ಆಗಿ ಕೃಸಿ ಮಾಡದೆ, ತಕಂಡ ಸಾಲ ಕೊಡಿಕೆ ಆಗದ ಬಂಜದ ಬೊದ್ಕುನ ಕುಹಕ ಉಟ್ಟು.

ಹಿಂಗೆ ಅರೆಬಾಸೆ ಜಾನಪದದ ಒಂದು ಬಗೆಯ ಸಾಹಿತ್ಯ ಆದಂತಹ ಅರೆಬಾಸೆ ಚುಟುಕುಗ ಹುಡ್ಕಿರೆ ಇನ್ನೆಷ್ಟೋ ಸಿಕ್ಕುವೋ. ಅದರ ಎಲ್ಲ ಇಲ್ಲಿ ಬರೆಕೆ ಕಷ್ಟ. ಇದರ ಬಗ್ಗೆ ಬೇರೆನೇ ಒಂದು ಸಂಶೋಧನಾ ಅಧ್ಯಯನ ಮಾಡುವಷ್ಟು ಸೊತ್ತುನ ವಿಸಯಗ ಒಳೋ. ಅಶ್ಲೀಲತೆ ಮತ್ತೆ ಪೆದಂಬು ರೀತಿಲಿ ಇರುವ ಕೆಲವು ಪದ್ಯಗಳ ಇಲ್ಲಿ ಬರ್ತ್ಲೆ. ಮುಂದೆನ ದಿನಂಗಳಲ್ಲಿ ಅದರ ಬಗ್ಗೆ ದೊಡ್ಡ ಮಟ್ಟ್ ನ ಬರವಣಿಗೆಗ ಬರುವಂತಾಗಲಿ.

**ಮಾಹಿತಿ ಮತ್ತೆ ಸಹಕಾರ**

* ಅರೆಬಾಸೆ ಚುಟುಕುಗ (ಶ್ರೀ ಕುಲ್ಲಚನ ಕಾರ್ಯಪ್ಪ 1985; ಗೌಡ ದೊನಿ, 117–119)
* ಕೊಂಬೋಲಗ (2000)
* ಸುಧೀರ್ ಏನೆಕಲ್
* ಚಾಮರಾಜ ಗೌಡ ಕಡ್ಯ ದೇರುಮಜಲು

---

**ಜೀವನ್ ಪುರ**
ಪುರ ಮನೆ, ಮರ್ಕಂಜ ಗ್ರಾಮ ಮತ್ತು ಅಂಚೆ
ಸುಳ್ಯ ತಾಲೂಕು, ದ.ಕ– 574248
jeevan.pv3@gmail.com




# ಸುರು ಸೀರೆ ಉಟ್ಟ ನೆನ್ಪು

● **ಅನುಷಾ ಟಿ.ಹೆಚ್.**

ಹೆಣ್ಣ್ ಮಕ್ಕ ಸೀರೆಲಿ ಬಾರಿ ಲಾಯ್ಕ ಕಂಡವೆ ತೇಳ್ದು ನಮ್ಮ ಗಂಡ್ ಮಕ್ಕಳ ಮಾತ್. ಸೀರೆ ಉಡ್ದು ಸುರುಗೆ ಬಾರಿ ಬಂಗದ ಕೆಲ್ಸ. ನಾನು ಒಂದು ಮೊದ್ವೆಗೆ ಸೀರೆ ಉಡಕಲತಾ ಬಾರಿ ಆಸೆಲಿ ಇದ್ದೆ. ನಮ್ಮ ಹಕ್ಕಲೆನ ನೆಂಟ್ರಳ್ಗ ಮೊದ್ವೆಗೆ ಸೀರೆ ಉಡೊಕುತಾ ಅಲೋಚನೆ ಬಾತ್. ಹಂಗೆ ಸೀರೆನ ಸುಳ್ಯದ ಕೃಷ್ಣಾ ಸ್ಟೋರ್‌ಂದ ತಕಂಡೆ. ಕೆಲವು ಸೀರೆಗ ದಪ್ಪ ಇದ್ದವುಕ್ಕೆ ಲಾಯ್ಕ ಕಾಂಬೊಲೆ ತಾ ಚಿಕ್ಕಮ್ಮ ಹೇಳ್ತಾ ಇದ್ದ. ಹಂಗೆ ನಂಗೆ ಒಂಬುವ ಸೀರೆನ ತಕಂಡ್ ಬಂದೆ. ಮದ್ವೆಗೆ ಇನ್ನ್ ಒಂದು ವಾರ ಬಾಕಿ ನಂಗೆ ಗೊತ್ತಿರುವ ಟೈಲರ್ ಹಕ್ಕಲೆ ರವಿಕೆ ಹೊಲೆಕೆ ಕೊಟ್ಟೆ. ಎರಡ್ ದಿನಲಿ ನಂಗೆ ಹೊಲ್ದ್ ಕೊಡೋಕು ತೇಳೋಳೆ. ಆದು ತೇಳಿ ಅವು ಒಪ್ಪಿದ. ಆದರೂ ಸುರು ಸೀರೆ ಉಡ್ದುತೇಳಿಕನ ಒಂದು ತರಾ ಹೆದ್ರಿಕೆನೂ ಅದೆ. ಹೇಂಗೆ ಸೀರೆ ಸುತ್ತಿ ಹೋದು, ಮೊದ್ವೆಗೆ ಸುಮಾರ್ ಜನ ಸೇರುವಾ ಹಂಗೆ ಹಿಂಗೆ ತಾ ನೆನ್ಸಿಕಂಡ್ ದಿನ ಹೋದ್ ಗೊತ್ತೆ ಅತ್ಲೇ. ಸೀರೆ ಉಡ್ದು ಮಾತ್ರ ಅಲ್ಲಾ. ಅದರ ನೆರಿ ಎಲ್ಲಾ ಸರಿ ನಿಲ್ಲೋಕು ಅಲಾ, ಹಂಗೆ ನೆರಿಗೆ ಹಾಕುವ ಪಿನ್ ಉಟ್ಟಲಾ ಅದರ ಫ್ಯಾನ್ಸಿ ಅಂಗ್‌ಡಿಗಿ ಹೋಗಿ ತಕಂಡೆ.

ಇನ್ನ್ ರವುಕೆ ಸಿಕ್ಕಿಕ್ಕೆ ಒಂದೇ ಬಾಕಿ. ಅದನ್ನು ಕೇಳಿಕ್ಕೆ ಟೈಲರ್ ಅಣ್ಣನ ಹಕ್ಕಲೆ ಹೋದೆ. ಅವುಕ್ಕೆ ಸೀರೆ ಹೊಲೆಕೆ ಕೊಟ್ಟದ್ ನನ್ನ ನೋಡಿಕ್ಕನವೆ ನೆಂಪಾದ್. ಈ ಅಕ್ಕಾ ಅದರ ಹೊಲೆಕೇ ಆತ್ಲೆ. ನಂಗೆ ಬೇರೆ ಮದ್ವೆ ಸೀರೆಗಳ ಹೊಲೆಕ್ಕೆ ಇತ್ತ್. ನಾಳೆ ಬೊಳ್ಪಿಗೆ ಬನ್ನಿ ನಾ ನಾಳೆ ಹೊಲ್ದ್ ಕೊಟ್ಟನೆ ತಾ ಹೇಳ್ದೊ. ಅದು ಹೆಂಗೂ ಇನ್ನೂ ನಾಳೆ ಬೊಳ್ಪಿಗೆ ಸಿಕ್ಕಿದೆ. ಆದು ತೇಳಿ ನಾನು ಮನೆಗೆ ಬಂದೆ. ಹಂಗೆ ಮಾರ್ನೆ ದಿನ ಬೊಳ್ಪಿಗೆ ಹೋಗಿ ಕೇಳಿಕ್ಕನೂ ಅವರದ್ದ್ ಅದೇ ಉತ್ತರ. ನಂಗೆ ಹನಿ ಸಿಟ್ಟ್ ಬಾತ್. ಮದ್ವೆಗೆ ಇನ್ನ್ ಎರಡ್ ದಿನ ಬಾಕಿ. ಸೀರೆ ಸಿಕ್ಕಿರೆ ಅದರ ಚೂರು ನೀರಿಗೆ ಹಾಕೊಕು. ಹೊಸ ಸೀರೆ ಅಲ್ಲ. ಬಣ್ಣ ಹೋದೆನಾ ಇಲ್ಲೆನಾ ತಾ ನೋಡೊಕು. ನಾನು ಚೂರು ಜೋರು ಮಾಡಿ ಕೇಳ್ದೆ. ಇಲ್ಲೆ ಅಕ್ಕ ನೀವು ಕಾಲೇಜಿಗೆ ಹೋಗಿ ಬಾಕನ ಬನ್ನಿ ನಾ ಹೊಲ್ದ್ ಕೊಟ್ಟನೆ ತೇಳ್ದ ಜನ ನಾ ಹಿಂಬೊತ್ತಿಗೆ ಬಾಕನ ಅಂಗಡಿ ಬಾಗಿಲ್ ಹಾಕಿ ಎಲ್ಲೋ ಹೋಗೋಳೊ. ಇನ್ನ್ ಎಂತ ಮಾಡ್ದು, ಪೋನು ಮಾಡಿರೆ ಪೋನು ಸಿಕ್ಕುಲ್ಲೇ. ಈ ಸಲ ನಾ ಮೊದ್ವೆಗೆ

ಸೀರೆ ಉಡುವ ಕನ್ಸ್‌ನನೆ ಬುಟ್ಟಳೆ. ಚೂಡಿನನೆ ಕೋಸಿಕಂಡ್ ಹೋಕಲೆ ತೇಳಿ ಬೆಚ್ಚಲಿ ಇದ್ದೆ. ನಂಗೆ ಹನಿ ಅಂಬೆರ್‌ಪು ಜಾಸ್ತಿ. ಅದು ಸೀರೆ ಉಡ್ದು ಸುರು ತೇಳಿಕ್ಕನ ಇನ್ನ್ ಚೂರು ಜಾಸ್ತಿ ಅಂಬೆರ್‌ಪು ಅತ್. ಇನ್ನ್ ನಾಳೆ ಕಾಲೇಜಿಗೆ ಹೋಗಿ ಬಾಕನ ರವುಕೆ ಹೊಲ್ದ್ ಆಗದಿದ್ದರೆ ಸೀರೆನ ತಕಂಡ್ ಬಾದು ತಾ ನೆನ್ಸಿದೆ. ಹಂಗೆ ಕಾಲೇಜಿಂದ ಬಾಕನ ವಾಪಾಸ್ ಹೋದೆ. ಬಾರಿ ಕೆಲ್ಸಲಿ ತಲೆ ಅಡಿಗೆ ಹಾಕೆಂಡ್ ನೋಡಿ ನೋಡದವರಂಗೆ ಕುದ್ದಿದ್ದ. ನಂಗೆ ಬೊಯೆಕ್ಕ್ ಹೆದ್ರಿಕೆ ಅತ್. ಬ್ಯೊದರೂ ನನ್ನ ಸೀರೆ ಸಿಕ್ಕೊಕಲೆ ಕೊಡದಿದ್ದರೆ ಎಂತ ಮಾಡ್ದು ಹಂಗೆ ಸುಮ್ಮನೆ ಹೋಗಿ ಅವರ ಎದುರ ನಿಂತೆ. ನೋಡಿರೆ ನಾ ಹೇಂಗೆ ಇಸಿ ಬಂದಳೆ ಹಂಗೆ ಉಟ್ಟು ನಾ ಇಸಿದ ಸೀರೆ. ಒಂದು ಚೂರು ಮುಟ್ಟಿತ್ಲೇ. ಮತ್ತೆ ನನ್ನ ನೋಡಿ ಸುಮಾರ್ ಕತೆ ಹೇಳಿಕ್ಕೆ ಸುರು ಮಾಡ್ದ. ಹನಿ ಚೂರು ಬ್ಯೊಯಕ್ಕೆ ಹೋದೆ. ತುಂಬಾ ಹೊತ್ತಾದು ನಾಳೆ ಖಂಡಿತ ಕೊಟ್ಟನೆ. ಇಂದ್ ಹೊತ್ತು ಸುಮಾರ್ ಅದು, ಕತ್ತಲೆ ಅದು ತೇಳ್ದ. ನಂಗೂ ಜೇಪಿಗೆ ಹೊತ್ತಾಗಿತ್ತ್. ಹೇಂಗೆ ಬೇಕಾರ್ ಸಾಯೆಲಿ, ನಾಳೆ ನಂಗೆ ಸಿಕ್ಕೊಕೇ ಇಲ್ಲರ್ ದುಡ್ಡು ಕೊಡಿಕ್ಕಿಲೆ ತೇಳಿ ಸರಿ ಹೇಳಿಬಂದೆ. ಪುಣ್ಯಾತ್ಮ ಮಾರನೇ ದಿನ ಹೋಕನ ಹೊಲೆಕ್ಕೆ ಕುದ್ದಿದ್ದ. ನಂಗೆ ಚೂರು ಖುಷಿ ಅತ್. ಹಿಂಬೊತ್ತಿಗೆ ಅದು ತೇಳಿದ್ದ. ಹಂಗೆ ಹಿಂಬೊತ್ತುಬಾಕನ ಇಷ್ಟ್ ದಿನ ಕಾಯ್‌ತ್ತಿದ್ದ ಸೀರೆ ರವ್ಕೆ ಇಂದ್ ಸಿಕ್ಕಿತ್. ನಾಳೆ ಮೊದ್ವೆ. ನೀರಿಗೆ ಹಾಕಿರೆ ಬೊಳ್ಪು ಅಕನ ಒಣ್‌ಗುದಾ? ಹಂಗೆ ಅದರ ಮೊಡ್‌ಚಿ ಇಸಿದೆ. ಬೊಳ್ಪು ಅಕನಾ ಎಲ್ಲವೂ ಕನ್ನಡಿ ಮುಂದೆ ಲಾಯ್ಕ ಲಾಯ್ಕನ ಸೀರೆನ ಉಟ್ಟ್‌ಕಂಡ್ ಸರಿ ಮಾಡುವೆ. ನಾನು ನನ್ನ ಸೀರೆನ ಉಡಿಕೆ ಸುರು ಮಾಡ್ದೆ. ನೋಡಿರೆ ಎಂತಾ, ಒಂದು ರವುಕೆ ಕೈ ಟೈಟ್. ಇನ್ನೊಂದು ರವುಕೆ ಕೈಯಿ ಬಲ ಇಲ್ಲದವರಂಗೆ ಲೂಸ್ ಅವುಟು ಹೊಲ್ದ್‌ದ್. ಈಗ ಯಾವುದರ ಟೈಟ್ ಮಾಡ್ದು, ಯಾವುದರ ಬಿಚ್ಚಿಸುದು. ಎಲ್ಲವು ಹೊರ್ಟ್ ಅವುಟು. ಹೊತ್ತುನು ಅತ್. ಹೆಂಗೆ ಎಲ್ಲಾ ಮಾಡಿ ರವುಕೆಗೆ ಸೂಜಿಲಿ ಹೊಲ್ದ್ ಒಂದು ಸರಿ ಲೆಕ್ಕಕ್ಕೆ ಬಾತ್. ಇನ್ನ್ ಸೀರೆನ ಕತೆ. ನನ್ನ ಸೀರೆನ ನೆರಿ ಲಾಯ್ಕಲಿ ನಿಲ್ಲುದು ತೇಳಿ ಅದರ ಕತ್ತಲೆಗೆ ನೆರಿ ಮಾಡಿಕ್ಕೆ ಹೊತ್ಲೇ. ಬೊಳ್ಪಿಗೆ ಅದುನು ಕೈ ಕೊಡೋಕ. ಚಿಕ್ಕಮ್ಮ ಅಕ್ಕನವು ಎಲ್ಲಾ ಸೇರಿ ಸೀರೆ ಉಡ್ಸುದರಲ್ಲಿ ನನ್ನ ಒಂದು ಕತೆ ಮಾಡಿ ಬುಟ್ಟ. ಎರಡ್ ಗಂಟೆ ಸೀರೆನ ಹಿಡ್ಕ್‌ಕಂಡ್ ಉಡ್ಸುದೇ ಕೆಲ್ಸ. ಅತ್ ಸೀರೆನ ಕೋಲ. ಚೂಡಿ ಆಗಿದ್ದರೆ ಈ ನೆರಿ ಮಾಡ್ವ ಕೆಲ್ಸನೆ ಇತ್ತ್‌ಲೇ. ಸೀರೆನ ಎಷ್ಟ್ ನೆರಿ ಮಾಡೋಲೆ ಅಷ್ಟೇ ಅದ್ಕೆ ಪಿನ್ ಕುತ್ತ್ಯೊಳೆ. ನೆರಿ ಮಾಡಿ ಮಾಡಿ ಕೈಯಿ ಬೇನೆ ಸುರು ಅತ್. ಇನ್ನ್ ನಿಂಗೆ ಪಾರ್ಲರ್‌ಗೆ ಹೋಕಷ್ಟೇ ತಾ ಮಾವ ಹಂಗಿಸಿಕೆ ಸುರು ಮಾಡ್ದ. ಇನ್ನ್ ಸರಿ ಆಗದಿದ್ದರೆ ಸೀರೆ ಬೇಡ ಚೂಡಿ ಹಾಕೆಂಡ್ ಹೊರ್ಡ್ ಬೇಗ ಬೇಗ ತಾ

ಎಲ್ಲವೂ ಹೇಳಿಕೆ ಸುರು ಮಾಡ್ದ. ಸೀರೆ ಉಡೊಕು ತಾ ಅಷ್ಟ್ ಆಸೆ ಇದ್ದಂವ ಇನ್ನ್ ಚೂಡಿ ಹಾಕುದಾ ಒಮ್ಮೆ ಬೇಜಾರ್ ಅತ್. ಇನ್ನ್ ಸರಿ ಮಾಡಿಕೆ ಇಲ್ಲೇ. ಉಡ್ದು ಸಾಕ್ ತೇಳಿ ಅದನ್ನೇ ಸುತ್ತಿಕಂಡ್ ಹೊರ್ಟೆ. ಸೀರೆ ಅತ್ ಹೆಂಗಾರ್ ಸುತ್ತಿ, ಇನ್ನ್ ರವುಕೆ ಸರಿ ಅತ್ಲೇ. ನಾ ಸೂಜಿಲಿ ಹೊಲ್ದ್‌ದ್ ಸರಿ ಅತ್ಲೇ. ಇನ್ನ್ ಹೇಳಿರೆ ಮನೆಲಿ ರಾಮಾಯಣ ಸುರು ಅದು. ಅದೆಲ್ಲಾ ಬೇಡ ತೇಳಿ ಬಾಯಿಮುಚ್ಚಿ ಹೊರ್ಟೆ.

ಮದ್ವೆ ಮನೆಗೆ ಎತ್ತಿ ಒಳಗೆ ಹೋಕನ ಎಲ್ಲಾ ನೆಂಟ್ರಗ ಬಂದ್ ಮಾತಾಡ್ಸಿಕ್ಕೆ ಸುರು ಮಾಡ್ದ. ಶರಬತ್ತ್ ಎಲ್ಲಾ ಕುಡ್ದ್ ಕುದ್ದುರಿಕ್ಕೆ ಹೋದ. ನನ್ನ ರವಿಕೆಗೆ ನಾ ನೂಲಿಲಿ ಹೊಲ್ದ್‌ದ್ ಚೂರ ಬಿಚ್ಚಿಕಂಡ್ ಬಾಕೆ ಸುರು ಆತ್. ಬಲಗೈ ಲೂಸು ಅತ್. ಮುಂದೆ ಹೇಂಗೆ ಇತ್ತ್ ಹಂಗೆ ನೇಲಿಕ್ಕೆ ಸುರು ಅತ್. ಒಂದು ನೂಲು ಬಿಚ್ಚಿದ್ ಅಷ್ಟೇ. ನೋಡಿರೆ ಪೂರಾ ಲೂಸು ಲೂಸು ಅವುಟು. ನನ್ನ ರವುಕೆ ನೋಡ್ದ ಒಂದು ಅಕ್ಕ ಕೇಳ್ದ. ಇದೇನ್ ಹಿಂಗೆ ಲೂಸು ರವುಕ್ಕೆ ಹೊಲ್ಸುದು. ಅಚೆದ್ದ್ ಟೈಟ್ ಉಟ್ಟು ಅಲ್ಲಾ ತಾ ಕೇಳ್ದ. ನಂಗೆ ಎಂತ ಹೇಳೋಕು ಗೊತ್ತಾತ್ಲೆ. ಈ ಟೈಲರ್ ಅಣ್ಣಂಗೆ ಮನ್ಸಲೇ ಬ್ಯೊಯ್ಕಂಡ್. ಇವು ಕೇಳ್ದರ ನೋಡಿ ಮೊರ್ಯಾದಿನೂ ಹೊತ್. ಅದ್ ಈಗನ ಹೊಸ ಫ್ಯಾಶನ್ ಈಗ ಎಲ್ಲವೂ ಹಿಂಗೇ ಹೊಲ್ಸುದು ತೇಳ್ದೆ. ಆ ಅಕ್ಕ ಹೆಂಗೆ ನೆನ್ಸಿಕಂಡೊ ಗೊತ್ಲೇ. ನಾ ಎದ್ದ್ ಸೀದ್ ಊಟಕ್ಕೆ ಹೋದೆ. ಹೋಕು ಸರಿ ಅದೆನಾ. ನಡೆಕ್ಕನ ಅಲ್ಲಿ ಬಿಚ್ಚಿದೆ. ಇಲ್ಲಿ ಬಿಚ್ಚಿದೆ ತಾ ಅದು ಮನ್ಸಲಿ ಆಲೋಚನೆ. ಒಂದು ಕೊಡಿನ ಎಳ್ದರೆ ಇನ್ನೊಂದು ಕೊಡಿ ಜಾರ್ದು. ಹೀಂಗೆ ರಗಳೆ ಆಗಿ ಹೋಗಿತ್ತ್ ಅಂದ್ ನಾ ಉಟ್ಟ ಸೀರೆನ ಅವಸ್ಥೆ. ಊಟ ಮಾಡಿ ಸೀರೆನ ಉಟ್ಟ ತಪ್ಪಿಗೆ ಎಲ್ಲಿಗೂ ಹೋಗದೆ ಒಂದು ಕಡೆಲಿ ಸುಮ್ಮನೆ ಕುದ್ದೆ. ಆ ದಿನ ಸೀರೆಗೆ ನಾ ತೂಕ ಆಗಿದ್ದೆನೆ ಅಲ್ಲ ಸೀರೆ ನಂಗೆ ತೂಕ ಆಗಿತ್ತಾ ಒಂದೂ ಗೊತ್ತಾತ್ಲೇ. ಹೆಂಗೆಲಾ ಲಗಾಡ್ ಹೊಡ್ಕಂಡ್ ಮನೆಗೆ ಬಂದ್ ಬಿದ್ದೆ.

---

**ಅನುಷಾ ಟಿ.ಹೆಚ್.**
ತೃತೀಯ ಬಿ.ಎ., ಕುಕ್ಕೆ ಶ್ರೀ ಸುಬ್ರಹ್ಮಣ್ಯೇಶ್ವರ ಕಾಲೇಜು
ಸುಬ್ರಹ್ಮಣ್ಯ

# ಮೇಕೇರಿಯ ಹಾಲ್ಕಾಪಿಯ ದಿನಂಗ

## ● ಸ್ಮಿತಾ ಅಮೃತರಾಜ್ ಸಂಪಾಜೆ

ನನ್ನ ಮನೆ ದಕ್ಷಿಣ ಕನ್ನಡ್ ಜಿಲ್ಲೆ. ನಾ ಓದಿಕಾಗಿ ನನ್ನ ಅಜ್ಜಿಮನೆ ಮೇಕೇರಿಗೆ ಬಂದೆ. ನನ್ನ ಮನೆಲಿ ಹಾಲ್-ತುಪ್ಪಕ್ಕೆ ಏನೂ ಕಮ್ಮಿ ಇತ್ತ್ಲೆ. ಎರಡೆಮ್ಮೆಗ ಇದ್ದೊ. ನನ್ನಮ್ಮ ಹಾಲ್ ಕರ್ದ್, ಅರ್ಪಿ, ಅದರ ಎತ್ತಿಯೆತ್ತಿ ಸೌಟುಲಿ ಒಲೆ ಮೇಲೆ ಇಸಿ ಕಾಸುದರ ನೋಡುದೇ ಒಂದು ಕುಸಿ. ಹಂಗೆ ಅಮ್ಮ ಮಜ್ಜಿಗೆ ಗುತ್ತಿ ಹಿಡ್ದ್ ಮಜ್ಜಿಗೆ ಕಡ್ದ್ ಅದರ್‌ಂದ ಬೆಣ್ಣೆ ಕಟ್ಟುದು ನಂಗೊಂದು ವಿಸೇಸ. ಅಲ್ಲಿರ್ಕನ ನಂಗೆ ಹಾಲ್ ತುಪ್ಪ ಒಂದೂ ಬ್ಯಾಡ. ಆದರೆ ಮಾನ್ಮನೆಗೆ ಬಂದ ಮೇಲೆ ಅಲ್ಲಿ ವರ್ಸ ಇಡೀ ಕರಿ ಕಾಪಿನೇ ಕುಡಿಯಾಕಾದ ಸ್ಥಿತಿ.

ಮೇಕೇರಿಲಿ ನಂಗೆ ಗೊತ್ತಿದಂಗೆ ಅಲ್ಲಿ ಸುತ್ತ ಮುತ್ತ ಎಲ್ಲಾ ಗೌಡ್ರು ಮತ್ತೆ ಕೊಡ್ಗರೇ ಇರ್ದು. ಎಲ್ಲರ ಮನೇಲಿ ಹಟ್ಟಿ ತುಂಬಾ ದನಗ ಇರ್ತಿದ್ದೊ ಆದರೂ ಕರ್ ಬುಡುವ ಹಸ್ಗ ಇದ್ದದ್ ಬಾರೀ ಕಮ್ಮಿ. ಹೂಡುವ ಎತ್ತುಗ ಮಾತ್ರ ಇದ್ದದ್ದ್ . ಹಂಗಾಗಿ ಹೆಚ್ಚಿನ ಮನೆಗಲ್ಲಿ ಬೆಲ್ಲ ಹಾಕಿದ ಕರಿ ಕಾಪಿನೇ. ಆ ಚಳಿಗೆ ಅದರ್ನೇ ಅಮೃತನಂಗೇ ಕುಡಿಯಕನ ಎಲ್ಲಾರ್ ಹಾಲ್ ಹಾಕಿದ ಕಾಪಿ ಸಿಕ್ಕಿರೆ ಕೇಳೊಕಾ? ಸಾಮಾನ್ಯ, ಮೊದುವೆ ಮನೆಗಲ್ಲಿ ಕೂಡ ಹಾಲ್ ಹಾಕಿದ ಕಾಪಿ ಕೊಡ್ತಿತ್ತೆ. ಒಂದ್ಸಲ ನಮ್ಮ ಚಿಕ್ಕಮ್ಮಂಗೆ ಹೆರಿಗೆ ಆಕನ ಅವು ಇಲ್ಲೇ ಎರಡ್ ತಿಂಗ ಇದ್ದೊ. ಆಗ ಕೂಸಿಗೆ ಹಾಲ್ ಕಮ್ಮಿ ತೇಳಿ ಹಾಲ್ ತಾಕೆ ಒಂದು ಸಣ್ಣ ಕುಪ್ಪಿ ಕೊಟ್ಟು ನನ್ನ ಕಳ್ಸಿದ್ದೊ. ನಮ್ಮ ಗದ್ದೆ ದಾಟಿದಂಗೆ ಒಂದು ಹಳ್ಳ ಸಿಕ್ಕಿದೆ. ಆ ಹಳ್ಳ ದಾಟಿರೆ ಒಂದು ಮಲೆಯಾಳಿಗಳ ಮನೆ ಸಿಕ್ಕಿದೆ. ಅಲ್ಲಿ ಒಂದು ಕರ್ ಬುಡುವ ಹಸ್ ಇತ್ತ್. ಅವರೊಟ್ಟಿಗೆ ಕೇಳಿ ಕೂಸಿಗೊಂದು ಚಕ್ಕಳ ಹಾಲ್ ಸಿಕ್ಕಿರೆ ಸಾಕ್ ಅಂತ ಕೇಳ್ದ ಮೇಲೆ ಕೂಸಿಗೆತೇಳಿ ಅವು ಹಾಲ್ ಕೊಡಿಕೆ ಒಪ್ಪಿಕೊಂಡೊ. ಬೊಳ್ಪುಗೆ ಯಾಗೋಳು ನಂಗೆ ಹಾಲ್ತರುವ ಕೆಲ್ಸ. ಸುರು ಸುರುಗೆ ನಂಗೆ ಆಕೇಲೆ ಹೋಕೆ ಅಂತ ಗಲಾಟೆ ಮಾಡಿದ್ದೆ. ಯಾಕೇತೇಳಿರೆ ಆ ಚಳಿಲೆ ಬೊಳ್ಪುಗೆ ಗದ್ದೆ ಪುಣಿ ದಾಟಿ, ಬಟ್ಟೆ ಚಂಡಿ ಮಾಡಿಕಂಡ್ ಹಳ್ಳ ದಾಟಿ ಹೋಗಿ ಹಾಲ್ತರುವ ಕೆಲ್ಸ ಯಾರಿಗೆ ಬೇಕು? ಇಂದ್ ಒಂದೇ ದಿನ ಹೋದು ನಾ, ನಾಳೆಂದ ನಾ ಹೋಲೆತೇಳ್‌ದವಳು ದಿನಾ ಹೋಕೆ ಸುರು ಮಾಡ್ದೆ. ಕಾರಣ ಇಸ್ಟೆ, ಅವು ನಂಗೆ ಕುದುರುಸಿ ಒಂದು ಕುಪ್ಪಿ ಗ್ಲಾಸ್ಲಿ ಹಾಲಾಕಿದ ಕಾಫಿ ಕೊಡ್ತಿದ್ದೊ. ಅಬ್ಬಾ! ಎಸ್ಟು ರುಚಿ. ಹಂಗೆ ನೋಡಿರೆ ಕರಿ ನೀರ್

ಕಾಪಿಗೆ ಹನೀಸ್ ಹಾಲ್ ಅವು ತೋರ್ಸ್ತಿದ್ದೊ ಅಸ್ಟೆ. ಆದರೆ ಅದೇ ದೊಡ್ಡ ಸಂಗತಿ ಆಗಿತ್ತ್ ನಂಗೆ. ಅವು ನಾ ಹೋದಂಗೆ ಹಾಲ್ಕಾಪಿ ಕೊಡುವ ವಿಸ್ಯ ನಾ ಯಾರಿಗೂ ಹೇಳಿಕೋತ್ಲೆ. ಯಾಗೋಳು ನಾನೇ ಬೇಗ ಎದ್ದ್ ಕುಪ್ಪಿ ಹಿಡ್ಕಂಡ್ ಹೋದು ನೋಡಿ, ಪಾಪ ಕೂಸು ಚಳಿಲೇ ಹೊಳೆ ದಾಟಿ ಹೋಕಲ ಅಂತ ಅವ್ವ ಹೊಟ್ಟೆ ಉರ್ಸ್ಕಣ್ತಿದ್ದದ್ ಕೇಳ್ತಿತ್ತ್.

ಸಾಲೆಂದ ಬಂದಾಂಗೆ ಕುಡಿಯಕೆ ಹತ್ತಿ ಆಗಿ ಸಾಯ್ತಿತ್ತ್. ಆಗ ಕುಡಿಯಕೆ ಆದರೆ ನೀರ್ ಕುಡಿವ ಕ್ರಮ ಇಲ್ಲೆ.  ಕಾಪಿನೇ ಕುಡಿಯೋದು. ಸಾಲೆಗೆ ಕೂಡ ಅಸ್ಟೆ, ಸಣ್ಣ ಕುಪ್ಪಿಲಿ ಕಾಪಿನೇ ತಕೊಂಡ್ ಹೋದು. ಸಾಮಾನ್ಯ ಹೆಚ್ಚಿನ ಮಕ್ಕ ಕೂಡ ಅದನ್ನೇ ತರ್ತಿದ್ದದ್. ಅಲ್ಲಿನ ಚಳಿಗೆ ಎಲ್ಲವೂ ಕಾಪಿನೇ ಕುಡಿಯತ್ತಿದ್ದದ್ ಕಂಡದೆ. ಹತ್ತನೆ ಕ್ಲಾಸಿಲಿ ಇರ್ಕನ ನಂಗೆ ಲೆಕ್ಕ ಕಸ್ಟ ಹೇಳಿ ನಾ ಮರ್ಟ್ ,ಕರ್ದ್ ಟ್ಯೂಷನ್ ಗೆ ಹೋನೆ ಹೇಳಿ ಒಪ್ಪಿಸಿದೆ. ಬಸ್ಸ್ ಇಳ್ದು ಒಂದು ಕಾಲ್ ಗಂಟೆ ನಡ್ದರೆ ಒಂದು ಭಟ್ರ ಮನೆ ಸಿಕ್ತಿತ್ತ್. ಅಲ್ಲಿ ರಿಟೈರ್ಡ್ ಪ್ರೈಮರಿ ಶಾಲೆ ಮಾಷ್ಟ್ರ ಇದ್ದೊ. ಅಲ್ಲಿಗೆ ತುಂಬಾ ಮಕ್ಕ ಹೋಗಿ ಪಾಸಾಗಿದ್ದೊ. ಅಲ್ಲಿಗೆ ಹೋದರೆ ಮಕ್ಕ ಹೆಂಗೋ ಪಾಸಾದವೆಂತ ಹೇಳ್ದು ಕೇಳಿ ನಾನೂ ಹೋಕೆ ಸುರುಮಾಡ್ದೆ. ಹೋಕೆ ಏನೋ ಹೋದೆ. ನಾ ಇಂಗ್ಲೀಸ್ ಮೀಡಿಯಮ್ ಆದ ಕಾರಣ, ಅವಿಕೆ ಹೇಳಿಕೊಡಿಕೆ ಗೊತ್ತಾತಿತ್ಲೆನೋ ಅಥವಾ ನಂಗೇ ತಲೆಗೆ ಹತ್ತ್ತಿತ್ಲೆನೋ ಗೊತ್ತಿಲ್ಲೆ. ಆದರೆ ನಂಗೆ ಸ್ವಲ್ಪನೂ ಅರ್ಥ ಆತಿತ್ಲೆ. ಅವರ ಹೆಣ್ಣು ಬಾರಿ ಲಾಯ್ಕದ ಹಾಲು ಹಾಕಿದ ಕಾಪಿಮಾಡಿ ತಂದು ಕೊಡ್ತಿದ್ದೊ. ನಿಜ ಹೇಳೋಕುತಾದರೆ ನಾ ಅದರ ಕುಡಿಯಕೆ ಆಗಿಯೇ ಅಲ್ಲಿಗೆ ಹೋತಿದ್ದೆ. ಆದರೆ ಲೆಕ್ಕ ಸುಟ್ಟು ತಿಂಬಕೆ ಬರದೇ ಇದ್ದರೂ ಸನಾ ನಾ ಸರೀ ಮೂವತ್ತೈದು ಮಾರ್ಕು ತೆಗ್ದು ಪಾಸಾಗಿ ಬುಟ್ಟೆ. ಆ ಭಟ್ರಲ್ಲಿ ಪಾಟ ಹೇಳ್ಸಿಕಣಿಕೆ ಹೋದವು ಎಲ್ಲಾ ಪಾಸಾದವೆಂತ ಹೇಳುದರನ ನಾ ಸತ್ಯ ಮಾಡಿ ಬುಟ್ಟೆ. ಅವರ ಲೆಕ್ಕ ಪಾಟ ಇಷ್ಟ ಆಗದಿದ್ದರೂ ಬಿಳಿ ಕಾಪಿ ಮಾತ್ರ ಭಾರೀ ಇಸ್ಟ ಆಗಿ ಹೋಗಿತ್ತ್.

ಒಂದು ದಿನ ಸಾಲೆಲಿ ಎಂತದೋ ಕಾರ್ಯಕ್ರಮ ಉಟ್ಟುತೇಳಿ ಹೊತ್ತಾಗಿತ್ತ್, ನಂಗಿಂತ ದೊಡ್ಡ ಗೂಡೆ ಒಬ್ಬಳ್ ರೋಡ್ ದಾಟಿಕನ ಸಿಕ್ಕಿತ್. ಅವುಳ್ ಕಾಲೇಜಿಗೆ ಹೋವ ಗೂಡೆ. ನಮ್ಮ ಮನೇ ದಾರಿಲೆ ಅವುಳಿಗೂ ಹೋಕು. ಬಾ ಒಂದು ಗ್ಲಾಸ್ ಕಾಪಿ ಕುಡ್ದು ಪೋಯಾಂತ ಅವುಳು ಕರಿಯಕನ  ನಂಗೆ ಹೆದ್ರಿಕೆ ಆಕೆ ಸುರು ಆತ್. ಒಂದನೆಯದಾಗಿ ನಮ್ಮ ಕೈಲಿ ದುಡ್ಡುಕೊಡ್ತಿತ್ಲೆ. ಇನ್ನ್ ಚಾಯ ,ಕಾಪಿತೇಳಿ ಹೋಟೇಲಿಗೆ ಹೋದು ಗೊತ್ತಾರೆ ನನ್ನ ಮಾವ ನನ್ನ ಸನಿಯೇ ಬುಡ್ಸಿ ಬುಡ್ದು. ನಾ ಬಾದುಲೆತೇಳಿರೂ ಅವಳು ಕೇಳ್ತೇಲೆ. ಬಾನೇ ಗೂಡೆ, ನೀ ನೆಂಟತಿ

ಅಲಾ. ನಾನೇ ಕೊಟ್ಟನೆ ಹೇಳ್ತ್. ಒಂದ್ ಕಡೆಂದ ಹೆದ್ರಿಕೆ, ಮತ್ತೊಂದ್ ಕಡೆಂದ ಹಾಲ್–ಕಾಪಿ ಕುಡಿಯಕೆ ಆಸೆ. ಮನೇಲಿ ಮಾವಂಗೆ ಗೊತ್ತಾಗದಿದ್ದರೆ ಸಾಕ್ ತೇಳಿ ಮೆಲ್ಲಂಗೆ ಇಸ್ಬು ಕಾಕನ ಅಂಗಡಿಗೆ ಹೊಕ್ಕಿದೆ.

ಮೇಕೇರಿಲಿ ದಾರಿ ಬದೀಲಿ ಇದ್ದದ್ದ್ ಚಾಯದ ಅಂಗಡಿ ಇಸ್ಬು ಕಾಕನ ಅಂಗಡಿ ಒಂದೇ. ಸಾಯಂಕಾಲ ಹೊತ್ತುಲಿ ಹೈದಂಗೆಲ್ಲ ಕೆಲ್ಸ ಮುಗ್ಸಿ ಬಂದ್ ಕುದ್ರುದು ಕೂಡ ಅದೇ ಅಂಗಡಿಲಿ. ಎಷ್ಟೋ ಸಲ ನನ್ನ ಮಾವ ಅಲ್ಲಿ ಬಂದ್ ಕುದ್ದವೆ. ನಾಳೆ ಎಲ್ಲಾರ್ ಮಾವ ಬಂದರೆ ಇಸ್ಬು ಕಾಕ, ನಿಮ್ಮ ಗೂಡೆ ಇಲ್ಲಿ ಕಾಪಿ ಕುಡ್ ದು ಹೋತುತೇಳಿ ಬುಟ್ರೆ ಅಂತ ಒಂದು ಪುಕುಪುಕು ಇದ್ದೇ ಇತ್ತ್. ಒಂದ್ ಗ್ಲಾಸ್ ಕಾಪಿ ಕುಡ್ದರೆ ಏನು ಆದುಲೆ ನೀ ಕುಡಿನೆ ಅಂತ ಒತ್ತಾಯ ಮಾಡಿ ಸುಧಾನೇ ಕಾಪಿ ಕುಡ್ಸಿ ಅದರ ದುಡ್ಡು ಬೇರೆ ಅವಳೇ ಕೊಟ್ಟತ್. ಒಂದ್ ಗ್ಲಾಸ್ ಕಾಪಿಗೆ ತೊಂಬತ್ತ್ ಪೈಸೆ ಆಗ. ಅಹಾ! ಎಸ್ಟ್ ಲಾಯಿಕ ಆ ಕಾಪಿ. ನೊರೆ ನೊರೆ ಆಗಿ ಗ್ಲಾಸ್‌ಲಿ ಅರ್ಧ ಇತ್ತ್. ಕಾಪಿ ಅರ್ಧನೇ ಇದ್ದರೂ ನೊರೆನ ನ ಹೀಂಪಿ ಹೀಂಪಿ ಕುಡ್ದು ಬುಟ್ಟೆ. ನಂಗೆ ಕಾಪಿ ಕುಡ್ಸಿದ ಸುಧಾಕ್ಕ ಬಾರಿ ಒಳ್ಳೆ ಗೂಡೆ ಅಂತ ಅನ್ನಿಸ್ತ್. ಮನೆ ತಲ್ಪಿ,ಅ ವ್ವನ ಕರಿ ಕಾಪಿಕುಡಿಯಕೆ ಯಾಕೋ ಮನ್ಸೇ ಆತ್ಲೆ. ಇಸ್ಬುಕಾಕನ ಹೊಟೇಲಿನ ಕಾಪಿ ರುಚಿ ಎಲ್ಲಿ ಕಳ್ದ್ ಹೋಗಿ ಬುಟ್ಟದನೆತಾ ಹೆದ್ರಿಕೆ. ಅವ್ವನೊಟ್ಟಿಗೆ ಮೆಲ್ಲ ಹೇಳ್ದೆ, ನಂಗೆ ನೀ ಬೊಯ್ಯಕಾಗದ್ ಅವ್ವ..ಆತ್ ಕೂಸ್ ಒಮ್ಮೆ ಎಂತ ಹೇಳ್. ಅವ್ವ.. ನಂಗೆ ಸುಧಾಕ್ಕ ಹೊಟೇಲ್ ಲಿ ಕಾಪಿ ಕುಡ್ಸಿತ್. ಅದಿಕ್ಕೇನಾತ್, ಪಾಪ ಒಳ್ಳೆ ಗೂಡೇ ಕುಡ್ಸಿತಲ ನಿಂಗೆ ಹೇಳ್ತ್. ಅದೆಲ್ಲಿತ್ತೋ ಮಾವ, ಹೊಟೇಲಿಗೆ ಹೋಗಿ ಕಾಪಿ ಕುಡಿವಸ್ಟು ಆಗೋಳನಾ ನೀ ಅಂತ ಸಣ್ಣ ಕೋಲು ಹಿಡ್ಕಂಡ್ ನಂಗೆ ಸರೀ ಕೊಟ್ಟತ್. ಅವ್ವನೇ ಬಯ್ದು ಬುಡ್ಸಿತು. ಆಗೆಲ್ಲಾ ಮಾವನ ಹಿಟ್ಲರ್ ನಂಗೆ ಅನ್ಸಿರೂ ಎಸ್ಟು ಜಾಗ್ರತೆ ಪಾಟ ಹೇಳಿ ಕೊಟ್ಟತ್ ಅಲಾ ಅಂತ ಈಗ ಅನ್ಸಿದೆ. ಈಗ ಕೂಡ ಅಷ್ಟೆ, ಸುಮ್ಮ ಸುಮ್ಮಗೆ ಹೋಟೇಲಿಗೆ ಹೋಕೆ ಮನ್ಸೇ ಆದುಲೆ. ಮೇಕೇರಿಲಿ ಸಿಕ್ಕ ಕಾಪಿಯ ಅನುಭವ ಪ್ರತೀ ಸಾರಿ ಕಾಪಿ ಕುಡಿಯಕಾಕನನೂ ನೆನ್ಪಾಗಿ ಮೈ ಬೆಚ್ಚಂಗಾದೆ. ಈಗ ಜಾಸ್ತಿ ಹಾಲಾಕಿದ ಕಾಪಿ ಚಾಯ ಕುಡಿಯೋದು ಆರೋಗ್ಯಕ್ಕೆ ಒಳ್ಳದಲ್ಲಂತಾ ಎಲ್ಲಾ ಕರಿ ಕಾಪಿ, ಕಣ್ಣಿ ಚಾಯ ಕುಡಿಯೊದು ಕಾಂಬಕನ ನೆಗೆನೂ, ಬೇಜಾರನೂ ಒಟ್ಟಿಗೆ ಆದೆ.

---

**ಸ್ಮಿತಾ ಅಮೃತರಾಜ್. ಸಂಪಾಜೆ**
'ಹಸಿರು', ಬಾಲಂಬಿ ಅಂಚೆ, ಚೆಂಬು ಗ್ರಾಮ ಮಡಿಕೇರಿ ತಾ, ಕೊಡಗು–574234
ಫೋ– 9980402968




# ಮನಸ್ಸೇ ರಿಲ್ಯಾಕ್ಸ್ ಪ್ಲೀಸ್

● ಉದಯಕುಮಾರಿ ಚೆಂಬು

ಹೌದ್ ಇಂದ್‌ನ ದಿನಲಿ ಹಿಂಗೆ ಹೇಳಿಯೇ ಹೇಳಕಾದೆ. ಮೊಯಿಂಸರ ಮನ್ಸ್ ಕತ್ತಲೆ ಬೊಳ್ಪಾಕೆ ಮುಂದೆ ಯಂತ್ರದ ಹಂಗೆ ಬದಲಾಕಂಡೇ ಇದ್ದದೆ. ಈಗನವೆಲ್ಲಾ ತುಂಬಾ ಕಲ್ತ್ ಎಲ್ಲಾ ವಿಷಯಗಳ ತಿಳ್ದ್ ಅವರವರ ಪ್ರಯೋಜನಕ್ಕೆ ತಕ್ಕ ಉಪಯೋಗ ಮಾಡುವೆ. ಕೆಲವ್ ಜನ ಮತ್ತೊಬ್ಬಂಗೂ ಪ್ರಯೋಜನಕ್ಕೆ ಬರ್ಲಿತ ನೆನ್ಸುವೆ.

ಇದ್ ಒಂದ್ ತರದ ವಿಷಯ ಆದರೆ ಕೆಲವ್ಕೆ ಒಳ್ಳ ವಿಚಾರಗಳ ಹೇಳಿಕೆ ಕೆಟ್ಟದಾಗಿ ನೆನ್ಸುವೆ. ಕೆಟ್ಟ ವಿಚಾರಗಳ ಹೇಳಿರೆ ಬೇಗ ತಲೆಗೆ ಹಾಕಂಡವೆ. ಇದೆಲ್ಲ ಕೆಬಿ ಕೊಟ್ಟ್ ಕೇಳ್‌ವಷ್ಟ್ ಪುರುಸೊತ್ತ್ ಇಲ್ಲದ್, ಮನ್ಸ್‌ಗೆ ತಕಂಬಂತ ಶಕ್ತಿ ಇಲ್ಲದಿರ್ದು ಮತ್ತೆ ಕೆಲವ್ಕೆ ಎಲ್ಲಾ ನಂಗೊತ್ತುಟ್ಟು ಯಾರೂ ಹೇಳುವ ಅಗತ್ಯ ಇಲ್ಲೆ ಕೇಳುವ ಕೆಬಿನೂ ನಂದಲ್ಲ. ನೆನ್ನಿ ಹಾಂಕಾರದ ಲೋಕ ನೋಡುವೆ.

ಇಂತವ್ಕೆ ಆಲೋಚನೆನೇ ಇದ್ದದೆ ಹೊರ್ತು ಮಾನಸಿಕ ನೆಮ್ಮದಿ ಇರ್ದುಲೆ.



ಆಲೋಚನೆ ಇದ್ ಕೆಲವ್ಕೆ ಹಗ್‌ಲ್ ಹೊತ್ತ್‌ಲಿ ಕೆಲವ್ಕೆ ರಾತ್ರೆ ಹೊತ್ತ್‌ಲಿ ಇದ್ದದೆ.

ಕತ್ತಲೆಗೆ ಮಲ್ಗಿರೂ ನಿದ್ದೆ ಬಾದ್ಲೆ ಆಲೋಚೆನೆಲಿ ಮುಳ್ಗಿ ತಲೆಬಿಸಿ ಮಾಡುವೆ.

ಇಂದ್‌ನ ದಿನಲಿ ಸಣ್ಣ ಮಕ್ಕಳ್‌ಂದ ದೊಡ್ಡವರವರೆಗೆ ತಲೆಬಿಸಿ ತಲೆಬಿಸಿ. ಈ ತಲೆಬಿಸಿ ಯಾಕೆ ತೇಳಿರೆ ಇಂದ್‌ನ ದಿನಲಿ ಸೆಕೆಂಡ್ ಸೆಕೆಂಡಿಗೂ ಪೈಪೋಟಿ.

ಈ ಪೈಪೋಟಿಗೆ ತಯಾರ್ ಆಗ್‌ವಷ್ಟ್ ತಾಕತ್ತ್ ಬೇಕು. ತಾಕತ್ತ್ ಇಲ್ಲರೆ ತಲೆಗೆ ತಲೆ ಹೊಡ್ಕಂಬೊವೌ ಎಷ್ಟೋ ಜನಗ ಒಳೊ.

ನಮ್ಮ ಹಿರಿಯವರ ಕಾಲಲಿ ತಲೆಬಿಸಿ, ಅಂಬೆರ್ಪು ಹಂಞ ಮೊಟ್ಟೆಗೆ ಕಡ್ಮೆನೆ. ಕತ್ತಲೆಗೆ ಮಲ್ಗಿರೆ ಬೊಳ್ಪಿಗೆ ಎದ್ರ್‌ಕನ ಸುಟಿ ಸುಟಿಯಾಗಿ ಇರ್ತಿದ್ದೊ.

ಇಂದ್ ನಾಕ್ ಕಾಲ್‌ಲಿ ಓಡುವ ನಾವ್ಗೆ ನಿದ್ದೆಲಿ ಕೂಡ ಯಥೆ ಪಿಡ್ಕ್ ಸದ್ದ್ ಕೇಳಿರೆ ಕೂಡ್ಲೆ ಎಚ್ಚರ ಆದೆ.

ಸರಿಯಾದ ನಿದ್ದೆ ಇಲ್ಲರೆ ಸರ‍್ರಕೆ ಉಲ್ಲಾಸ ಇರ್ದುಲೆ ಸೀಕ್ ಸುರಾದೆ ಹಂಗೆನೇ ಮೆದುಳು ಕೆಲ್ಸ ಮಾಡ್ದುಲೆ. ಈ ಕಾರಣಂದ ಕೆಲವ್ ಜನ ಸರಾಯಿ ಕುಡಿದು, ಬೀಡಿ, ಸಿಗರೇಟ್ ಎಳೆದು, ಡ್ರಗ್ಸ್ ತಕಂಬೊದ್, ನಿದ್ದೆ ಮಾತ್ರೆ ತಕಂಬೊದ್, ಚಟ ಆಗಿದ್ದದೆ. ತಲೆ ಕೊರೆಕೆ ಸುರಾದೆ.

ಇಂತವರ ಮನ್ಸ್‌ಲಿ ಕುಸಿ ಇರ್ದುಲೆ ಸಂಸಾರದ ಮೇಲೆ ಪ್ರೀತಿ ಇರ್ದುಲೆ. ಪ್ರೀತಿಸುವ ಮನ್ಸ್ ಪುರುಸೊತ್ತು ಇರ್ದುಲೆ.

ಇಂದ್ ಪುರುಸೊತ್ತ್ ಇಲ್ಲದವೌ ಹೈಸ್ಪೀಡ್‌ಲಿ ಇದ್ದವೆ. ಹೈ ಸ್ಪೀಡ್‌ಲಿ ಮಾಡ್ದ ಕೆಲ್ಸಕೆ, ಅಂಗ್-ಮುಂಗ್ ಇರ್ದುಲೆ. ನಾವ್ ಎಷ್ಟೋ ಜನಗಳ ನೋಡ್ತ ಒಳೊ ಮೊದುವೆ, ಮನೆ ಒಕ್ಕುಲು, ಬೇರೆ ಬೇರೆ ಜಂಬರಗಳಿಗೆ ಹೋದವೆ, ಆದರೆ ಅಲ್ಲಿ ಹತ್ತ್ ನಿಮಿಷ ನಿಲ್ಲಿಕೆ ಅವರ ಮನ್ಸ್ ಒಪ್ಪುದ್ಲೆ.

ಊರವರ ನೆಂಟ್ರ್‌ಗಳ, ಮಾತಾಡ್ಸಿಕೆ ಪುರುಸೊತ್ತ್ ಇರ್ದುಲೆ ನಿತ್ತ್‌ಕಂಡ್ ಉಂಡೋ ಉಣದೊ ಕೈ ತೊಳ್ದಾಂಗೆ ಮಾಡಿ ಕೈ ಪಸೆ ಆರಿಕೆ ಮುಂದೆ ಅಂಬೆರ್ಪುಲಿ ಹೊರ್ಟವೆ. ಇದೆಲ್ಲಾ ತಲೆಲಿ ತುಂಬಿದ ಹತ್ತೇಂಟ್ ಕೆಲ್ಸಗ.

ಇಂದ್‌ನ ವೈವಾಟ್‌ಲಿ ತಾಳ್ಮೆನೇ ಇಲ್ಲೆ. ತಾಳ್ಮೆ, ಪುರುಸೊತ್ತ್ ತೇಳ್‌ವ ಜಾಗೆಲಿ ಇನ್ನೊಂದ್ ಸೇರ್‍ದ್ದ ಮೊಬೈಲ್ ಹಡ್ಸರ-ಬಡ್ಸರ ಕೆಲ್ಸ ಮಾಡಿ ಪೋನ್‌ಲಿ ನೇಲುವ ಹುಚ್ಚಿಂದ ಮೀಯಕನ, ದೇವುರ ಪೂಜೆ ಮಾಡ್‌ಕನ,

ಉಂಬಕನ-ತಿಂಬಕನ ಮೊಬೈಲ್ ಕೈಯಿಲೇ ಬೇಕು. ಸಂಸಾರಂದ ಹೆಚ್ಚಿ ಮೊಬೈಲ್ ಮೇಲೆ ಪ್ರೀತಿ ತೋರ್ರುವೆ.

ಅಂದೆಲ್ಲಾ ಹಬ್ಬ ಹರಿದಿನಗಳ್ಲಿ ಅವರವರ ಕೆಲ್ಸ ವೈವಾಟ್‌ಗ ಏನೇ ಇದ್ದರು. ರಜೆ ಹಾಕಿ ಸಂಸಾರದೊಟ್ಟಿಗೆ ಕುಸೀಲಿ ಕಳೆತ್ತಿದ್ದೊ.

ಈಗನವ್ಕೆ ಒಂದು ದಿನನೂ ಪುರುಸೊತ್ತ್ ಇಲ್ಲದೆ ಕೆಲ್ಸ ಬ್ಯೂಸಿ ಬ್ಯೂಸಿ ತಲೆ ಬಿಸಿ.

ಪೇಟಿಲಿರೋವಂತೂ ಗಂಟೆನ ಲೆಕ್ಕಚಾರ ಮಾಡಿಕಂಡೇ ಇದ್ದೊವೆ. ಬೊಳ್ಪಿಗೆ ನಾಕ್ ಗಂಟೆಗೆ ಎದ್ರೊಕು ಮನೆ ಕೆಲ್ಸ ಮಕ್ಕಳ ಕೆಲ್ಸ ಅವ್ಕೆ ತಿಂಬುಕೆ ಉಂಬುಕೆ ತಯಾರ್ ಮಾಡಿ ಅಂಬೆರ್ರುಲಿ ತಿಂದೊ ತಿನ್ನದೆನೋ ಆಫೀಸ್‌ಗೆ ಹೊರ್ಡುವ ಹಿಂಸೆ.

ಯಾರೂ ಮಾತಾಡಿರೂ ಮಾತಾಡುವ ಮನ್ಸಿಲ್ಲೆ. ಇಂತವ್ಕೆ ಏನೂ ಹೇಳಿರೂ ಒಂದ್ ಗಳ್ಗೆಲಿ ಸಿಟ್ಟ್ ಬಂದಾತ್. ಯಾರಾರ್ ಮನೆಗೆ ಬಂದರೆ ಮನ್ಸ್‌ಲೇ ಬೊಯ್ಯುಂಬ ಅಬ್ಬೆಸ ಕೆಲವ್ಕೆ. ಹಿಂಗೆ ನಾನಾ ತರದ ವೇಷಗ. ಇಂತ ವೇಷಗಳ ಸೃಷ್ಠಿ ಮಾಡಿಕಣ್ಡ್ ನಾವ್ ನಾವೆ.

ತಲೆ ಬಿಸಿ ಮಾಡಿಕಾಗದ್, ಅಂಬೆರ್ರು ಇರಿಕಾಗದ್‌ತ ಹೇಳಿಕಾದ್ಲೆ, ತಲೆ ಇದ್ದವಂಗೆ ತಲೆಬಿಸಿ ಇದ್ದೇ ಇದ್ದದೆ. ಆದರೆ ಎಲ್ಲಾ ವಿಷಯಗಳ್ಲಿ ಅಂಬೆರ್ರು ತಲೆಬಿಸಿ ಮಾಡುವ ಅಗತ್ಯ ಇಲ್ಲೆತ ನನ್ನ ನಂಬಿಕೆ. ಅಗತ್ಯ ಬೀಳ್‌ವ ವಿಷಯಕ್ಕೆ ತಲೆಬಿಸಿ ಅಲ್ಲ ತಲೆ ಖರ್ಚ್ ಮಾಡಿರೆ. ಒಳ್ಳೆದ್‌ತ ನನ್ನ ಭಾವನೆಂತ ಹೇಳ್ನೆ. ಹಂಞ ಹೊತ್ತಾರ್ ಮನ್ಸ್‌ನ ಕುಸೀಲಿ ಇಸಿಕಂಬೊಕೆ ನೋಡೋಕು.

ಅಂಬೆರ್ರು, ಅರ್ಜೆಂಟ್. ತಲೆ ಬಿಸಿ. ಎಲ್ಲೊವುಕೂ ಇದ್ದೇ ಇದ್ದದೆ. ಎಷ್ಟೋತ್ತಿಗೂ ಇದ್ ಲಾಯ್ಕಲ್ಲ ಮತ್ತೆ ಕುಸಿನೂ ಇರ್ದುಲೆ. ಒತ್ತಡಂದ ಹೊರಗೆ ಬಾಕೆ ಪಯತ್ನ ಮಾಡೋಕು.

**ಉದಯಕುಮಾರಿ ಚೆಂಬು**
96322900436

# ಮಾಯಾಕನ್ನಡಿ

● ಪೂರ್ಣಿಮಾ ತಂಟೆಪ್ಪಾಡಿ

ಹಲೋ ಹೇಂಗೆ ಒಳರಿ? ನಾ ನಿಮ್ಮ ಪ್ರೀತಿನ ಮೊಬೈಲ್. ಅಲ್ಲಲ್ಲಾ ಮಾ... ಯಾ... ಕನ್ನಡಿ. ನೀವು ನನ್ನ ಇಷ್ಟಪಟ್ಟರೆ ಅಲಾ? ಯಾರ್ ನನ್ನ ಇಷ್ಟಪಡ್ದುಲೆ ಹೇಳಿ. ಅಜ್ಜಂಗಾದರ್ ನನ್ನ ಚೂರು ಹೊತ್ತು ಮರ್ತ್ ಬುಡುವ. ಆದರೆ ಮಕ್ಕ. ಗೂಡೆಗ, ಹೈದಂಗ ನನ್ನ ಮರೆಯುದುಟ್ಟಾ? ಅವು ಎಲ್ಲಿಗೇ ಹೋಗಲಿ, ನಾನೂ ಅವರ ಒಟ್ಟಿಗೇ ಬೇಕೇ ಬೇಕು. ಅವರ ಜೇಬ್‌ಲಿ, ಪರ್ಸ್‌ಲಿ, ಬ್ಯಾಗ್‌ಲಿ ನಾ ಇಲ್ಲೆಂತಾದರೆ ಅವರ ಸಂಕಟ ಹೇಳಿಕೆ ಸಾಧ್ಯ ಇಲ್ಲೆ.

ನಾ ಮೊನ್ನನ ಪ್ರಮುಖ ಸಂಪರ್ಕ ಸಾಧನ ಸೊತ್ತು. ಎಲ್ಲವ್ಕೂ ನಾ ಬೇಕೇ ಬೇಕು. ನಾ ಇಲ್ಲೆಂತಾದರೆ 'ನೀರ್‌ಂದ ಹೊರಗೆ ತೆಗ್ದ ಮೀನ್‌ನಂಗೆ' ಅವು ಒದ್ದಾಡುದು ನೋಡಿಕಾದೆನಾ? ಕೆಲವು ಹೇಳುವೆ ನಂಗೆ ಕಣ್ಣ್ ಕಾಂಬೊದಿಲ್ಲೆ ಅಂತ. ಆದರೂ ಮೊಬೈಲ್‌ನ ಕನ್ನಡಕ ಹಾಕಿ ಒತ್ತುವೆ. ಇನ್ನ್ ಕೆಲವ್ಕೆ ನೆಟ್‌ವರ್ಕ್ ಸಮಸ್ಯೆ ಅಂತ. ಅದಿಕ್ಕೆ ನೆಟ್‌ವರ್ಕ್ ಇರುವ ಜಾಗಕ್ಕೆ ಮೊಬೈಲ್ ಹಿಡ್‌ಕಂಡ್ ಹೋಗಿ ಕುದ್ದು ನೋಡುವೆ. ಹೀಂಗೆ ನನ್ನ ಉಪಯೋಗಿಸದೇ ಇರುವ ಜನ ಯಾರೂ ಇರಿಕಿಲ್ಲೆ.

ನಾ ಜನಕ್ಕೆ ಒಂದು ದಿನಕ್ಕೆ ಮಾತ್ರ ಬೇಕಾದವನಾ? ಅಲ್ಲ. ಅವು ಕುಸಿಲಿ ಇರಕುಂತಾದರೆ ನಾ ಯಾಗೊಳು ಒಟ್ಟಿಗೇ ಬೇಕು. ಸಣ್ಣ ಮಕ್ಕಳ್‌ಂದ ಮುದುಕರವರೆಗೆ ಎಲ್ಲವ್ಕೂ ನಾ ಇಲ್ಲೆಂತಾದರೆ ಜೀವನವೇ ಇಲ್ಲೆ ಅಂತ ಹೇಳುವಷ್ಟರಮಟ್ಟಿಗೆ ನನ್ನ ಪ್ರೀತಿ ಮಾಡುವೆ. ಒಮ್ಮೊಮ್ಮೆ ಜನಗ ನನ್ನ ಬೊಯ್ಯೊದುಟ್ಟು ಹಾಳಾದ ಈ ಮೊಬೈಲ್ ಸರಿ ಇಲ್ಲೆಂತ. ಹಾಂಗೆಂತ ಹೇಳಿ ಸುಮ್ಮನೆ ಕುದ್ರಿಕೆ ಆದೆನಾ? ಹೊಟ್ಟೆಗೆ ತಿನ್ನದಿದ್ದರೂ ಆದು. ತಕ್ಷಣ ಮೊಬೈಲ್ ಅಂಗಡಿಗೆ ಹೋಗಿ ಅದರ ಸರಿಮಾಡ್ಸಿದ ಮೇಲೆನೇ ಅವುಕೆ ನೆಮ್ಮದಿ.

ನನ್ನ ಹಾಂಗೆನೇ ಬೇರೆ ಸಂಪರ್ಕ ಸಾಧನ ವಸ್ತುಗ ಸುಮಾರ್ ಉಟ್ಟು. ನನ್ನ ಬದಲಿಗೆ ಬೇರೆ ಸಾಧನ ಉಪಯೋಗಿಸಿನೆ ಅಂತ ಹೊರಟರೂ ಜನಗ ಸೋತರೆ. ಏಕೆಂತ ಹೇಳ್ರೆ ನಾ.. ನಾನೇ.. ನನ್ನ ಜಾಗಕ್ಕೆ ಬೇರೆ ಯಾರೂ ಸಮಾನಾಗಿ ಬಾಕೆ ಸಾಧ್ಯ ಇಲ್ಲೆ. ನನ್ನಲ್ಲಿ ಹಲವಾರ್ ರೀತಿಗ ಉಟ್ಟು. ಜನಗ ತುಂಬಾ ರಸಿಕರ್. ಅವರವರ ಇಷ್ಟಕ್ಕೆ ಅನುಸಾರವಾಗಿ ನನ್ನ ಆಯ್ಕೆ ಮಾಡುವೆ. ಅದರ್ಲಿಯೂ ಹೈದಂಗ ಮತ್ತು ಗೂಡೆಗಳ ಮೊಬೈಲ್ ಕವರ್‌ಗಳಲ್ಲೂ ವ್ಯತ್ಯಾಸ ಉಟ್ಟು.

ಮೊಬೈಲ್‌ಗ ಕೂಡ ಕೆಲವು ಸಣ್ಣದ್, ದೊಡ್ಡದ್ ಉದ್ದದ್ ಅಗಲದ್ ಬೇರೆ ಬೇರೆ ಕಂಪೆನಿಗಳ್ದ್ ಎಷ್ಟೋ ರೀತಿನದ್. ಅಂಗಡಿಗೆ ಹೋದರೆ ಯಾವುದರ ಆಯ್ಕೆ ಮಾಡ್ದುಂತ ನಿರ್ಧಾರ ಮಾಡಿಕೆ ಕಷ್ಟ. ಕೆಲವು ಜನರ ಕೈಯಲಿ ಎರಡೆರಡು ಮೊಬೈಲ್‌ಗ. ಎಡಗೈಯಲಿ ಒಂದು ಮಾತಾಡಿಕೆ. ಬಲಗೈಯೌಲಿ ಒಂದು ಮೆಸೇಜ್, ವೀಡಿಯೋ, ಗೇಮ್, ಫೋಟೋ, ಸೆಲ್ಫಿ, ಗೂಗಲ್ ಪೇ ಇತ್ಯಾದಿ. ತಲೆ ಅಡಿಗೆ ಹಾಕಿರೆ ಮೇಲೆ ಎತ್ತುದೇ ಕಷ್ಟ.

ಜುಲೈ 31, 1995ರ್‌ಲಿ ಭಾರತ ದೇಶಲಿ ನನ್ನ ಜೀವನ ಶುರುಮಾಡ್ದೆ. ಪಶ್ಚಿಮ ಬಂಗಾಳದ ಮುಖ್ಯಮಂತ್ರಿ ಜ್ಯೋತಿಬಸು ಸುಖಾರಾಂಗೆ ಸುರುನ ಫೋನ್‌ಕಾಲ್ ಮಾಡ್ದ. ಟೆಲಿಪೋನ್ ಇಂದ್ ಸಂಪರ್ಕ ಸಾಧನಗಳಲ್ಲಿ ಎರಡನೇ ಸಾಧನ. ಜಪಾನ್‌ಲಿ 1973ರ್‌ಲಿ ನಾ ಹುಟ್ಟಿದ್. ಆಗ ನನ್ನ ತೂಕ 2 ಕೆ.ಜಿ. ನಂತರ ಬೇರೆ ಬೇರೆ ರೀತಿಲಿ ಅನ್ವೇಷಣೆ ಮಾಡ್ದ. ನನ್ನ ತೂಕ, ಗಾತ್ರಲಿ ಬಾರಿ ವ್ಯತ್ಯಾಸ ಆತ್. ಹಲವಾರ್ ಕಂಪೆನಿಗ ಹೊಸ ಹೊಸ ವಿನ್ಯಾಸಗಳ ಮೊಬೈಲ್ ರಚನೆ ಮಾಡ್ದ. ಇಂದ್ ಸ್ಯಾಮ್‌ಸಂಗ್ ಕಂಪನಿನ ಮೊಬೈಲ್‌ಗ ಗ್ರಾಹಕರ ಮನ್ಸ್ ಗೆದ್ದ್ ಸುರುನ ಸ್ಥಾನಲಿ ಉಟ್ಟು. ಬಾರೀ ಕಡಿಮೆ ದುಡ್ಡ್‌ಂದ ಸುರು ಆಗಿ ತುಂಬಾ ಜಾಸ್ತಿ ದುಡ್ಡುನವರೆಗೂ ನಾ ಒಳೆ. ಆದ್ದರ್‌ಂದ ಅವರವರ ಇಷ್ಟಕ್ಕೆ ಸರಿಯಾಗಿ ನನ್ನ ಆಯ್ಕೆ ಮಾಡುವೆ. ನಾ ಪ್ರತಿಯೊಬ್ಬರ ಪ್ರೀತಿಯ ಜೀವನ ಸಂಗಾತಿ.

ಸಣ್ಣ ಪ್ರಾಯಲಿ ಪುಸ್ತಕನ ತಲೆ ಅಡಿಗೆ ಹಾಕಿ ಓದಿರೆ ಮುಂದೊಮ್ಮೆ ತಲೆಎತ್ತಿ ಸಮಾಜಲಿ ನಡಿಯಕ್. ಆದರೆ ಓದುವ ಸಮಯಲಿ ಮಕ್ಕ ಮೊಬೈಲ್‌ನ ತಲೆ ಅಡಿಗೆ ಹಾಕಿ ಪ್ರತಿನಿಮಿಷ ಒತ್ತಿಕಂಡ್ ಇದ್ದರೆ ಮುಂದೊಂದು ದಿನ ಸಮಾಜಲಿ ತಲೆಎತ್ತಿ ನಡಿಯೊದು ಅಸಾಧ್ಯದ ಮಾತ್. ಯುವಜನತೆ ಇಂದ್ ಮಾಯಾ ಕನ್ನಡಿನ ಬಳಕೆಲಿ ದಾರಿ ತಪ್ತಾ ಒಳ. ಅತೀ ಹೆಚ್ಚ್ ಬಳಕೆ ಮಾಡುದರ್‌ಂದ ನಮ್ಮ ಆರೋಗ್ಯದ ಮೇಲೆ ವ್ಯತಿರಿಕ್ತ ಪರಿಣಾಮ ಆಗ್ತಾ ಉಟ್ಟು. ಮಾನಸಿಕ ಸ್ಥೈರ್ಯ ತುಂಬಾ ಕುಗ್ಗುತ್ತಾ ಉಟ್ಟು. ಜೀವನಲಿ ಸಮಸ್ಯೆಗ ಬಂದರೆ ಗಟ್ಟಿ ಮನಸ್‌ಂದ ಅದರ ಪರಿಹಾರ ಮಾಡುವಷ್ಟ್ ತಾಳ್ಮೆ ಇಲ್ಲೆ. ಮಾಯಾಕನ್ನಡಿ ಬಳಕೆ ಹಿತಮಿತವಾಗಿದ್ದರೆ ಅದ್ ನಮ್ಮ ಜೀವರಕ್ಷಕ. ಅತೀ ಬಳಕೆ ಆದರೆ ಅಮೃತನೂ ವಿಷವಾದೆಲಾ...?

ನಾ ಯಾರಿಗೂ ಭೇದ ಮಾಡ್‌ದುಲ್ಲೆ. ಎಲ್ಲವರ್‍ೂ ಒಂದೇ ರೀತಿಲಿ ನೋಡಿನೆ. ಹಾಂಗಾಗಿಯೇ ನಾ ಎಲ್ಲವ್ಕೂ ಬೇಕಾದವ. ನೀವೂ ಕೂಡಾ ನನ್ನ ಹಾಗೆ ಎಲ್ಲವರ್‍ೂ ಒಂದೇ ರೀತಿಲಿ ನೋಡಿಕಂಡ್ ಎಲ್ಲವ್ಕೂ ಬೇಕಾದವರ ಹಾಂಗೆ ಬದುಕಿರೆನಾ?

**ಪೂರ್ಣಿಮಾ ತಂಟೆಪ್ಪಾಡಿ** W/o. ಚಂದ್ರಶೇಖರ, ಗುಡ್ಡೆಮನೆ ಹೌಸ್




# ಕಿಚ್ಚಿ ಇಲ್ಲದೆ ಹೊಗೆ ಬಾದುಲೆ

● ಎಂ.ಜಿ. ಕಜೆ

ಮದ್ಯಾನ ಉಂಡ್ ಮಲ್ಗಿದವಂಗೆ ಪೋನ್ ಕರೆಕನವೇ ಎಚ್ಚರ ಆದ್ದ್. ಕಣ್ಣ್ ಉಜ್ಜಿಕನೇ 'ಹಲೋ' ತೇಳ್ರೆ ಅತ್ತಂದ ಮಾತಾಡ್ದ್– ಊರ್‌ಂದ ತಮ್ಮ. ಎಂತಯಾ? ಅಂತ ಕೇಳ್ರೆ ಅಂವ ಹೇಳ್ದ್ ಕೇಳಿ ಬಾರೀ ಬೇಜಾರಾತ್. 'ರವಿ ಮಂಗ್ಳೂರ್‌ಲಿ ಎಡ್ಮಿಟ್ ಆವುಟು. ಸೀರಿಯಸ್ ಉಟ್ಟುಗಡ. ಆದರೆ ಒಮ್ಮೆ ನೋಡಿ ಬಾ.' ಅಷ್ಟ್ ಹೇಳಿ ಪೋನ್ ಇಸಿತ್. ಓ ದೇವ್ರೆ ಅವಂಗೆ ಎಂತಾತಪ್ಪ. ಮನ್ನೆ ಮನ್ನೆ ಸರಿ ಇತ್ತ್, ಈಗ ಏನ್ ಮಾಡಿಕಣ್ತ್. ನಂಗೆ ತಲೆ ಬುಡ ಅರ್ತಾತ್‌ಲೆ. ಏನಾತ್‌ಂತ ಕೇಳಿಕೆ ಮುಂದೆನೇ ಅವ ಪೋನ್ ಇಸಿಟು. ಪೂರಾ ಇಸಯ ಹೇಳುವಷ್ಟ್ ಅವಂಗೆ ಪುರುಸೊತ್ತಿಲ್ಲೆಂತ ಕಂಡದೆ! ಎಂತಾ ಮೊನ್ಸ ಇಂವ. ಇಂವನ ಸುಡಿಕೆ. ಮನ್ಸ್‌ಲೇ ಬೊಯ್ಕಂಡೆ. ಹೇಂಗೂ ಆತ್ ಒಮ್ಮೆ ಹೋಗಿ ನೋಡಿ ಬನ್ನೆಂತ ಪೇಂಟ್‌ನು ಅಂಗಿನೂ ಕೋಸಿಕಂಡ್ ಆಸ್ಪತ್ರೆಗೆ ಹೋದೆ. ನಂಗೆ ಆಸ್ಪತ್ರೆಗೆ ಹೆಚ್ಚ್ ದೂರ ಇಲ್ಲೆ. ಗೇಟ್ ದಾಟಿ ಒಳಗೆ ಹೋಕನ 'ಮಾಸ್ಟ್ರೆ'ಂತ ಕರ್ದದ್ ಕೇಳಿ, ನೋಡಿರೆ ಮೂಸೆ. ಅಂವ ಹೊರಗೆ ಹೋಕೆ ಬಾತಿದ್ದಂವ. ಮೂಸೆ ಬ್ಯಾರಿ ಒಳ್ಳೆ ಹೈದ. ನಮ್ಮೂರ್‌ಲಿ ಸಣ್ಣದೊಂದ್ ಅಂಗ್ಡಿ ಇಸಿಕನುಟ್ಟು. ಎಂತ ಸಂಗತಿ ಮಾರಾಯ, ಏನಾತ್ ಅವಂಗೆ, ಈಗ ಹೇಂಗುಟ್ಟುಂತ ಉಸುರು ಕಟ್ಟಿ ಒಮ್ಮೆಲೇ ಎಲ್ಲಾ ಪ್ರಸ್ನೆನೂ ಕೇಳಿಯೇಬುಟ್ಟೆ. 'ಸಾರ್ ಕುಡುಕರಿಗೆ ಏನ್‌ಂತ ಹೇಳ್ದು ... ಮೂಂಕುಮುಟ್ಟ ಕುಡೇದು ಹೋದಲ್ಲಿ ಬಂದಲ್ಲಿ ಬೀಳ್ದುಂತ ಹೇಳ್ತ್.' 'ಓ ಹಾಂಗಾ ಕತೆ,' ಸಾಯೊಕು ಬೋಳಿಮಕ್ಕಂತ ಮನಸ್ಸ್‌ಗೆ ಬಾತ್, ಆದರೆ ಹೇಳಿಕಾತ್‌ಲೆ ಅವನಕ್ಕಲೆ ಹೇಳಿ ಏನ್ ಪ್ರೇಜನ ! ಮೂಸೆ ವಾಪಾಸ್ ತಿರ್ಗಿ ನನ್ನ ವಾರ್ಡ್‌ಗೆ ಕರ್ಕನ್ ಹೋತ್. ವಾರ್ಡ್‌ಲಿ ರವಿನ ಸುತ್ತ ಮುತ್ತ ನಾಲ್ಕೈದ್ ಹುಡ್ಗರ್ ನಿಂತ್‌ಕನಿದ್ದವು ಮಾಸ್ಟ್ರ ಬಂದೋಂತ ನಂಗೆ ದಾರಿ ಮಾಡಿ ಕೊಟ್ಟ. 'ಓಯ್ ರವಿ ಹೇಂಗೊಳ'ಂತ ಕೇಳ್ದೆ. ರವಿ ನನ್ನ ನೋಡಿ ನೆಗಾಡ್ತ್. ಒಮ್ಮೆ ನೆಗಾಡ್ದಂವ ಮತ್ತೆ ಕಣ್ಣ್ ಮುಚ್ಚಿ ಸುಮ್ಮನಾತ್. ಯಾಗೋಳು ಬಾವ ಬಾವಂತ ತಮಾಸೆ ಮಾಡಂವ ಈಗ ಸುಮ್ಮಂಗೆ ಮಲ್ಗಿಟು. ಕುತ್ತಿಗೆಂದ ಕಾಗಡೆ ಮೆದುಕುದು ಕಾಂಬೊದುಲೆ. ಹಳಿ ಹೊತ್ತು ಅವನನ್ನೆ ನೋಡಿ ಸೋಂಪನ ಕರ್ಕಂಡ್ ಹೊರಗೆ ಹೋದೆ. 'ಎಂತಾತ್ ಸೋಂಪ, ಅಂವ ಏನೂ ಮಾತಾಡ್ತ್‌ಲೆಲ್ಲ

ಏನ್ ಕತೆ"ಂತ ಕೇಳ್ದೆ. "ಅವಂಗೆ ಮಾತಾಡಿಕಾದುಲೆ, ಕುತ್ತಿಗೆಂದ ಕಾಗಡೆ ಬಸ ಇಲ್ಲೆ. ಕಣ್ಣ್ ಬುಟ್ಟದೆ, ನೆಗಾಡ್ದೆ, ಹೇಳ್ದ್ ಅರ್ತ ಆದರೂ ಉತ್ತರ ಕೊಡಿಕೆ ಆದುಲೆ"ಂತ ಸೋಂಪ ಹೇಳ್ತ್. ಬೇಜಾರಾಗಿ ಕೇಳ್ದೆ 'ಹೇಂಗಾತ್ ಇದೆಲ್ಲ'? "ಕುಡ್ದ್ ಟೈಟ್ ಆಗಿ ಮಾಡಂಗೋಲ್‌ಲಿ ಮಲ್ಗಿದಂವ ಹೊಣ್ಕಿ ಕರ್ನಕುತ್ತ ಬಿದ್ದದ್‌ಗಡ. ಬೀಳ್‌ಕನ ಕುತ್ತಿಗೆಗೆ ಪೆಟ್ಟಾಗಿ ನರ್‌ಂಬು ಎಲ್ಲಾ ತುಂಡಾವುಟುಗಡ. ಏನೂ ಪ್ರೇಜನ ಇಲ್ಲೆಂತ ಡಾಕ್ಟ್ರ ಹೇಳಿಯೊಳ. ಬದ್ಕಿರೆ ನಾಕ್ ದಿನ ಬದ್ಕುದು. ಬದ್ಕಿರೂ ಪ್ರೇಜನ ಇಲ್ಲೆಗಡ" ಸೋಂಪನ ಮಾತ್ ಕೇಳಿ ಕಣ್ಣ್ ಒರ್ಸಿಕಂಡೆ.

ರವಿ ಒಳ್ಳೆ ಹೈದನೇ. ಯಾರಿಗೂ ಬೇಡದಂವ ಅಲ್ಲ. ಯಾರೇ ಎಂತಾ ಕೆಲ್ಸ ಹೇಳಿರುನೂ ಆದುಲೆಂತ ಹೇಳ್ದಂವ ಅಲ್ಲ. ನಾ ಊರಿಗೆ ಹೋದ ಸುದ್ದಿ ಸಿಕ್ಕಿರೆ ಸಾಕ್. ಮನೆಗೆ ಓಡೋಡಿ ಬಂದದೆ. ಆಚೆಕರೆಲಿ ಬಾಕನನೇ ಬಾವಾಂತ ಕರ್ಕಂಡ್ ಕುಸಲಾಟಿಕೆ ಮಾಡಿಕನ್ ಬಾತಿತ್. ಜಾಲ್‌ಗೆ ಬಾಕನೇ ನಮಸ್ಕಾರ ಬಾವ, ಅಡ್ಡಬಿದ್ದೆಂತ ಮಕ್ಕರ್ ಮಾಡಂವ. ಸಾವಾಸ ದೋಸ! ಮೊದ್ವೆ ಪ್ರಾಯ ಆದರೂ ಇನ್ನೂ ಮೊದುವೆ ಆತ್‌ಲೆ. ಮೊದುವೆ ಆಕೆ ಅಂವಂಗೆ ಒಂದು ಅಕ್ಕ ಉಟ್ಟು. ಅಕ್ಕಂಗೆ ಆಗದೆ ಇಂವ .......ಹೇಂಗೆ ಆದುಂತ ಬಾಕಿ ಆದ್. 'ಸೆಟ್ಟಿ ಹೋದಲ್ಲಿ ಪಟ್ಟಣಂತ' ಗಾದೆ ಉಟ್ಟು. ಹಾಂಗೇ ಯಾರಾರ್ ಕುಡೆಕೆ ಕೊಟ್ಟರೆ ಆತ್. ಅವರ ಬಿಟ್ಟಿ ಚಾಕ್ರಿಗೆ ರೆಡಿ. ಕುಡೆಕೆ ಸುರು ಮಾಡಿರೆ ಕೊಟ್ಟಷ್ಟ್ ಸಾಕಾಕಿಲ್ಲೆಗಡ. ದರ್ಮಕ್ಕೆ ಸಿಕ್ಕುದಲ್ಲಾ! ಹಾಂಗೆಂತ ಇಷ್ಟರವರೆಗೆ ಕುಡ್ದ್ ದಾರಿಕರೆಲಿ ಬಿದ್ದಂವ ಅಲ್ಲಂತ ಜನ ಹೇಳುವೆ. ಮನೆಲಿ ಅವ್ವನೂ ಅಕ್ಕನೂ ಇಬ್ಬೊರೆ ಇರ್ದು. ಇಂವ ಯಾಗೋಳು ತೋಟಲಿರುವ ಮಾಡಂಗೋಲ್‌ಲಿ ಮಲ್ಗುದು. ಎಲ್ಲಿಗೂ ಕೆಲ್ಸಕ್ಕೆ ಹೋಗದಿದ್ದರೆ ಮನೇಲೇ ಇರ್ತಿತ್ತ್. ಹಿಂಬೊತ್ತು ಮುಟ್ಟ ತೋಟಲಿ ಏನಾರ್ ಕೆಲಸ ಮಾಡ್ತಿತ್ತ್. ಹಿಂಬೊತ್ತಾಕನ ಗಾಳಿ ಸಂಚಾರಕ್ಕೆಂತ ಅಂಗಡಿ ಕಡೆಗೆ ಹೋದ್ದು ಮಾಮೂಲಿ ಕತೆ.

ಹಾಂಗೆ ಅಂಗಡಿಗೆಂತ ಹೋದರೆ ಹುಡ್ಗರ್ ಹುಡ್ಗರ್ ಸೇರಿಕಂಡ್ ಹೆಂಡ ಕುಡ್ಯಕೆ ಸುರು ಮಾಡ್ವೆ. ಮತ್ತೆ ಕತ್ತಲೆ ಆದರೂ ಗೊತ್ತಾದುಲೆ. ಮನೆಲಿ ಇಂವನ ಕಾದ್ ಕಾದ್ ಅವ್ವನು ಅಕ್ಕನೂ ದೀಪ ಕೆಡ್ಸಿ ಮಲ್ಗ್‌ತಿದ್ದೋ. ಇಂವ ಎಷ್ಟೊತ್ತಿಗಾರ್ ಬಂದ್ ಸೀದಾ ಮಾಡಂಗೋಲ್‌ಲಿ ಮಲ್ಗ್‌ತಿತ್ತ್. ಉಂಬೊದು ತಿಂಬೊದು ಏನಿಲ್ಲೆ. ಮತ್ತೆ ಬೊಲ್ಪೊಳ್ಪಿಗೆ ಎಲ್ಲಾ ಬಿರ್ದ ಮೇಲೆ ಚಾಯ ಕುಡೇಕೆ ಬಾತಿತ್‌ಗಡ.

ಅಂತಾ ರವಿ ಮಾಡಂಗೋಲ್‌ಂದ ಬಿದ್ದದ್‌ಂತ ಹೇಳಿರೆ ನಂಬಿಕಾದುಲೆ. ದಾರಿಕರೆಲಿ ಬೀಳದಂವ ಮಲ್ಗಿದ ಮೇಲೆ ಅದೂ ಅಟ್ಟಳಿಗೆಂದ ಹೇಂಗೆ ಬಿದ್ದತ್. ಒಂದು ಸಮ ಬಿದ್ದರೂ ಈ ನಮೂನೆ ಪೆಟ್ಟಾದುಂತೇಳ್ರೆ ನಂಬುದು ಹೇಂಗೆ? ಅಷ್ಟಕ್ಕೂ ಅಂವ ಬಿದ್ದ್ ಪೆಟ್ಟಾತ್‌ಂತ ನೋಡ್ದವು ಯಾರೂ ಇಲ್ಲೆ. ಗಂಟೆ ಹತ್ತಾದರೂ

ಮಜ ಬಾತ್‌ಲೆಂತ ಅಯ್ಯೆ ಮಾಡಂಗೋಲಿಗೆ ಬಂದ್ ನೋಡಿಕನವೇ ಗೊತ್ತಾದ್ದ್. ಎದ್ರಿಸಿಕೆ ನೋಡ್ರೆ ಹೈದಂಗೆ ಎದ್ರಿಕಾದುಲೆ. ಅಯ್ಯೆಗೆ ಎತ್ತಿಕೆನೂ ಆದುಲೆ. ಆಚೀಚೆ ಮನೆವ್ರ ಕರ್ದ್ದ್ ಎತ್ತಿರೆ ಹೈದಂಗೆ ಬಸ ಇಲ್ಲೆ. ಮೂರ್‍ನಾಲ್ಕ್ ಹೈದಂಗ ಸೇರಿ ಜೀಪುಲಿ ಸುಳ್ಯಕ್ಕೆ ತಕಂಡ್ ಹೋದೊ. ಅಲ್ಲಿ ಡಾಕ್ಟ್ರ ನೋಡಿ 'ಇಲ್ಲಿ ಆಕಿಲೆಣ್ಣ, ನೀವು ಮಂಗ್ಳೂರಿಗೆ ತಕನ್ ಹೋಗಿ'ಂತ ಹೇಳ್ದೊಗಡ.

ನಂಗೆ ಅನ್ಮಾನ ಮಾಡಂಗೋಲ್‌ಂದ ಬಿದ್ದರೆ ಹೀಂಗೆ ಆಕಿಲೆ, ಯಾರಾರ್ ಹೊಡ್ದ್ ಹಾಕ್ಯೊಳನೋಂತೇಳ್ರೆ ರವಿ ಉರ್ತ ಬಾಂವ ಹೈದ ಅಲ್ಲ. ಯಾರಿಗೂ ಕೇಡ್ ಬಗ್ದಂವ ಅಲ್ಲ. ಮತ್ತೆಂತಾತ್ ಗ್ಯಾನ ಮಾಡ್ರೆ ಮಂಡೆ ಬೆಚ್ಚ ಆದೆ. ಆಸ್ಪತ್ರೆಲಿ ಸೊಯೆ ಇಲ್ಲದೆ ಬಿದ್ದ್‌ಕನಿದ್ದ ರವಿನ ಹಕ್ಕಲೆ ನೆರೆ ಕರೆ ನಾಲ್ಕೈದ್ ಹುಡ್ಗರ್ ಇರ್‍ದ್ದು ಬುಟ್ರೆ ಬೇರೆ ಯಾರೂ ಬಾತ್‌ಲೆ. ಮೂಂಕುಮುಟ್ಟ ಕುಡ್‌ಸ್ತಿದ್ದೊ ಜನಂಗಾಗಲಿ, ಬಿಟ್ಟಿ ಚಾಕ್ರಿ ಮಾಡ್‌ಸ್ತಿದ್ದೊ ಜನಂಗಾಗಲೀ ಯಾರೂ ಇಲ್ಲೆ. ಹೀಂಗೇ ಇರಿಕನ ಒಂದು ದಿನ ರವಿ ಎಲ್ಲರ ಬುಟ್ಟ್ ಹೋಗಿಯೇ ಬುಟ್ಟತ್. ಅಂತು ಇಂತೂ ತಿಂಗ ಆರ್ ಕಳ್ತ್. ರವಿಗೆ ಏನಾಗಿತ್ತ್‌ಂತ ಯಾರಿಗೂ ಗೊತ್ತಾತ್‌ಲೆ.

ಒಮ್ಮೆ ಊರಿಗೆ ಹೋಕನ ಅವ್ವ ಹೇಳ್ತ್ 'ಊರ್‌ಲೆಲ್ಲ ಗುಸು ಗುಸು ಆವ್ತುಯಾ.....ಅಂತ.' ಎಂತ ಗುಸು ಗುಸುಂತ ಕೇಳಿ ಅವ್ವನ ಮೋರೆ ನೋಡ್ದೆ. ಅವ್ವ ಹೇಳ್ತ್ 'ಯಾರಿಗೂ ಹೇಳ್ಬಡ, ರವಿನ ಸುದ್ದಿ.....' ನಿನ್ನಕ್ಕಲೇ ಇರ್ಲಿಂತ ಗುಟ್ಟುಲಿ ಹೇಳ್ತ್. ಅವ್ವ ಹೇಳ್ದರ ಕೇಳಿ ನಂಬೊಕಾ ಬುಡೊಕಾಂತ ಗೊತ್ತಾತ್‌ಲೆ. "......... ಅವೆಲ್ಲ ಸೇರಿಕನ್ ಕೋಟಮಲೆಲಿ ಮರ ಕಡ್ದೊಳಗಡ, ಅದರ ರಾತ್ರೋ ರಾತ್ರೆ ಸಿಗ್ದ್, ಹೊತ್ತ್ ಸಾಗ್ಸಿಯೊಳಗಡ. ರವಿಗೆ ಸರೀ ಕುಡ್ಸಿ ಅವನಕ್ಕಲೆ ಹೊರ್‍ಸಿಯೊಳಗಡ. ನಾಲ್ಕೈದ್ ಜನ ಸೇರಿಕಂಡ್ ದೊಡ್ಡ ದೊಡ್ಡ ತುಂಡುಗಳ ತಲೆಲೇ ಹೊತ್ತ್‌ಕಂಡ್ ಬಾತಿದ್ದೊಗಡ. ಹಾಂಗೆ ಬಾಕನ ರವಿ ಕತ್ತಲೆಲಿ ಕಾಲ್ ಜಾರಿ ತಲೆಲಿದ್ದ ಬಾರಕ್ಕೆ ಕುಸ್ಕಿದಾಂಗೆ ಆಗಿ ಬಿದ್ದುಟುಗಡ. ಹಾಂಗೆ ಬಿದ್ದವನ ಎತ್ತಿಕನ್ ಬಂದ್ ಮಾಡಂಗೋಲ್‌ಲಿ ಬಿದ್ದಾಂಗೆ ಇಸಿ ಹೋಗೊಳೋಂತ" ಗಡ ಗಡ ಸುದ್ದಿ. ಹೇಳಿ ಆದ ಮೇಲೆ ಅವ್ವ ಮತ್ತೊಮ್ಮೆ ಯಾರಿಗೂ ಹೇಳ್ಬಡಂತ ಹೇಳ್ತ್. ಈ ಗಡ, ಗಡ, ಗುಸು, ಗುಸು ಸುದ್ದಿಗಳ ನೋಡ್ದವೂ ಇಲ್ಲೆ ಮಾಡ್ದವೂ ಹೇಳ್ತ್‌ಲೆ..... ಆದರೂ ಸುದ್ದಿ ಆವುಟು!... ಕಿಚ್ಚಿ ಇಲ್ಲದೆ ಹೊಗೆ ಬಾದುಲೆ...!!.

---


**ಎಂ.ಜಿ.ಕಜೆ**

'ಹಸೆಮನೆ'

1-3(ಜಿ)2, ಬಗಂಬಿಲ ರಸ್ತೆ, ಅಂಚೆ: ದೇರಳಕಟ್ಟೆ

ಮಂಗಳೂರು ದ.ಕ. 575018

# ನಿರ್ಧಾರ

● ಲಲಿತಾ ಕಟ್ರತನ, ಮಡಿಕೇರಿ

"ಹೊತ್ತಾರೆ ಎದ್ದ್ ಎಂತ ಪಿರಿಪಿರಿ ಶುರು ಮಾಡ್ಯೊಳ ಸರಸು ಎಂತಾತ್? ಯಾರ ಗ್ರಹಚಾರ ಬುಡ್ಸಿಕೆ ಪ್ಲಾನ್ ಹಾಕೊಳ?" ಶಂಕರ ಕೇಳ್ತ್.

"ನಿಮಿಗೆ ತಮಾಸೆ. ನನ್ನ ಕಷ್ಟ ನಂಗೆ. ಆ ಗೌರಿ ಮನೆಕೆಲ್ಸ ಮಾಡಿ ತೀರ್ಸಿನೆತೇಳಿ ಒಂದು ಸಾವಿರ ರೂಪಾಯಿ ತಕಂಡ್ ಹೋಗಿ ಒಂದ್ ತಿಂಗ ಆತ್. ದುಡ್ಡೂ ಇಲ್ಲೆ ಕೆಲ್ಸಕ್ಕೂ ಬಾತ್‌ಲೆ. ಒಮ್ಮೆ ಹೋಗಿ ನೋಡಿಕಂಡ್ ಬರಕಾಯ್ತ್ ಬೊಳ್ಪುಗೆ ಹೋಗದಿದ್ದರೆ ಸಿಕ್ಕುದುಲೆ. ಎತ್ತಾರ ಹೋಗಿದ್ದವೆ."

"ನಾನ್ ಕೊಡ್ಕನೇ ಹೇಳ್ದೆ. ಗೌರಿಗೆ ಕೊಟ್ಟ ಹಣ ಮಸಣಕೆ ಹೋದ ಹೆಣ ಎರಡೂ ಒಂದೆ ವಾಪಸ್ ಬಾದುಲೆತ ನನ್ನ ಮಾತ್ ಕೇಳ್ದ"

"ಮೊಯಿಂಸ ಕಷ್ಟ ಕಾಲಲಿ ಒಬ್ಬಂಗೆ ಒಬ್ಬ ಆಗದಿದ್ದರೆ ಹೆಂಗೆ. ಉಂಬಕೆ ಇಲ್ಲೆ ಕೆಲ್ಸನೂ ಸಿಕ್ತಿಲ್ಲೆ. ಮಕ್ಕ ಉಪಾಸ ಒಳೋತ ಹೇಳ್ಕನ ಹೊಟ್ಟೆ ಉರ್ದ್‌ಹೋತ್ ಕೊಟ್ಟ್‌ಬುಟ್ಟೆ. ಅವ್ಳ ಗಂಡ ಸೋಮ ಬ್ಯಾರೆ ಕುಡ್ಕ. ದುಡ್ಡದ್ ಎಲ್ಲಾ ಹೆಂಡದಂಗಡಿಗೆ ಸುರ್ದದೆ. ಅವ್ಳು ಒಬ್ಳು ಎಂತ ಮಾಡ್ದು. ಇದೊಮ್ಮೆ ಹೋಗಿ ಬನ್ನಿ."

"ಸರಿ ಬುಡ್. ಅವ್ಳ ಗಂಡ ಸೋಮನೂ ತೋಟ ಕೆಲ್ಸಕೆ ಬಾರದೆ ಸುಮಾರ್ ದಿನ ಆತ್ ಕೇಳಿ ಬನ್ನೆ"

"ಹಂಗೆ ಬಾಕನ ಅಂಗಡಿಂದ ಮನೆಗೆ ಸ್ವಲ್ಪ ದಿನಸಿ ಸಾಮಾನ್ ಮತ್ತೆ ತರಕಾರಿನೂ ತಂದ್ ಬುಡಿ. ತಕಣಿ ಇದ್‌ರ್‌ಲಿ ಒಂದು ಸಾವಿರ ಉಟ್ಟು"

ಶಂಕರ ದುಡ್ಡ್ ಬ್ಯಾಗ್ ತಕಂಡ್ ಜೀಪ್ ಹತ್ತಿ ಹೊರ್ಟತ್. ಗೌರಿನ ಮನೆ ಒಂದಿ ಮೈಲು ದೂರಲಿ ಇತ್ತ್. ಅವ್ಳು ವಾರಕ್ಕೆ ಎರಡ್ ಸಲ ಬಂದ್ ಮನೆ ಗುಡ್ಸಿ ವರ್ಸಿ ಹೋತಿತ್ತ್. ಈಗ ಒಂದ್ ತಿಂಗಂದ ಕೆಲ್ಸಕ್ಕೆ ಬಾತ್ಲೆ.

ಶಂಕರ ಹೋಕನ ಗೌರಿನ ಮನೆ ಮುಂದೆ ಸುಮಾರ್ ಜನ ಸೇರಿದ್ದೊ. ಅಲ್ಲೆ ಇದ್ದ ಒಬ್ಬನ ಕೇಳ್ತ್. "ಯಾಕೆ ಏನಾತ್?" ಗೌರಿಗೆ ಉಷಾರಿಲ್ಲೆ. ಎದೆ ಬ್ಯಾನೆತ ಆಸ್ಪತ್ರೆಗೆ ಹೋಕನ ಆಪರೇಶನ್ ಮಾಡಕುತ ಹೇಳ್ದೊ ಸುಮಾರ್ ಖರ್ಚಾದೆ ತನೂ ಹೇಳಿದ್ದೊ. ಉಂಬಕೇ ಕಷ್ಟ ಇನ್ನ್ ಅಷ್ಟ್ ದುಡ್ಡ್ ಎಲ್ಲಿಂದ ತಂದದೆ. ಕೆಲ್ಸ ಮಾಡಿಕಾದ್. ರೆಸ್ಟ್‌ಲಿ ಇರೊಕುತ ಹೇಳ್ದೊ. ಆದರೆ ಕೆಲ್ಸ ಮಾಡದಿದ್ದರೆ ಎರಡ್ ಸಣ್ಣ ಮಕ್ಕಳಿಗೆ ಊಟ ಹಾಕುದ್

ಹೆಂಗೆತ ಕೆಲ್ಸಕೆ ಹೋತಿತ್. ನಿನ್ನೆ ಎದೆಬ್ಯಾನೆ ಜೋರಾಗುಟ್ಟು. ಹಂಗೆ ಜ್ವರನೂ ಇದ್ದುಟ್ಟು. ಬೊಳ್ಪಾಕನ ಜೀವ ಹೋಗುಟ್ಟು."

ಶಂಕರನ ಎದೆ ಭಾರ ಆತ್. ಅವಳ್ನ ಬಾಡೆಲಿ ಮಲ್ಗಿಸಿದ್ದೊ ಎರಡ್ ಮಕ್ಕ ಅವ್ವ ಮೇಲೆ ಬಿದ್ದ್ 'ಏಳಮ್ಮಾ' ತೇಳಿಕಂಡ್ ಮರ್ಡ್ತಿದ್ದೊ. ಅವಳ ಗಂಡ ಸೋಮ ಎಲ್ಲಾ ಕಳ್ಳಂನಂಗೆ ಮೂಲೆಲಿ ಕುದ್ದ್ ಮರ್ಡ್ತಿತ್. ಹೆಣ್ಣ್ ಇರ್ಕನ ಅವ್ವ ಬೆಲೆ ಅವಂಗೆ ಗೊತ್ತಾಗಿತ್ಲೆ. ದಿನಾ ಕುಡ್ಕಂಡ್ ಬಾತಿತ್. ಬಂದಂಗೆ ಊಟ ಹಾಕಕು. ಮನೆಲಿ ಉಟ್ಟ ಇಲ್ಲೆತ ನೋಡ್ತಿತ್‌ಲೆ. ಹೊಡಿಯದ್ ಬಡಿಯದ್ ಮಾಡ್ತಿತ್. ಮಕ್ಕಳ ಜವಾಬ್ದಾರಿ ಇತ್ಲೆ.

ಶಂಕರನವರ್ನ ಕಂಡ್ ಸೋಮ ಓಡಿ ಬಾತ್. "ನೋಡಿ ಯಜಮಾನ್ರೆ ಗೌರಿ ಹೆಂಗೆ ಮಲ್ಗಿಟ್ಟು. ನನ್ನ ಮಕ್ಕಳ ತಬ್ಬಲಿ ಮಾಡಿ ಹೋಗಿಬುಡ್ತ್. ನಾ ಹೆಂಗೆ ಬದ್ಕಲಿ ಹೆಂಗೆ ಮಕ್ಕಳ ಸಾಕಲಿ. ಎಲ್ಲಾ ಅವ್ಳೇ ಮಾಡ್ತಿತ್ ನಂಗೆ ಎಂತದೂ ಗೊತ್ತ್‌ಲೆ." ಶಂಕರರಿಗೆ ಎಂತ ಹೇಳ್ದುತ ಗೊತ್ತಾತ್ಲೆ.

ಅಷ್ಟೊತ್ತಿಗೆ ಹಿರಿಯಂವ ಒಬ್ಬ ಬಂದ್. ಸೋಮನೊಟ್ಟಿಗೆ, "ಮುಂದೆನ ಕಾರ್ಯ ಮಾಡಕು. ಎಲ್ಲಾ ತಯಾರುಟ್ಟು. ಮಸಣ ಸುಮಾರ್ ದೂರ ಉಟ್ಟು ಗಾಡಿ ಬೇಕಾದೆ". ಸೋಮನ ಬಾಯಿಂದ ಮಾತೇ ಬಾತ್‌ಲೆ. ಅವನ ಕೈಲಿ ಒಂದು ರೂಪಾಯಿ ಸಹ ಇತ್ತ್‌ಲೆ. ಅಂದ್ ದುಡ್ಡದ್ ಅಂದಂದೇ ಖರ್ಚಾಗ್‌ತಿತ್.

ಶಂಕರಂಗೆ ಬಾಳಾ ಬ್ಯಾಜರ ಆತ್. ಹೆಣ್ಣ್ ಅಡ್ಗೆ ಸಾಮಾನ್ ತಾಕೆ ಕೊಟ್ಟಿದ್ದ ದುಡ್ಡ್‌ಗೆ ತನ್ನ ಕೈಲಿ ಇದ್ದ ದುಡ್ಡುನೂ ಸೇರ್ಸಿ ಎರಡ್ ಸಾವಿರ ರೂಪಾಯಿ ಸೋಮನ ಕೈಗೆ ಕೊಟ್ಟು. ಸೋಮ ಗಳಗಳತ ಮರ್ಟ್ ಅವರ ಕಾಲ್ ಹಿಡಿಯಕೆ ಬಾತ್.

"ಅದೆಲ್ಲಾ ಬ್ಯಾಡ ಸೋಮ. ಕಷ್ಟ ತೇಳ್ಕನ ಇಷ್ಟಾದ್ರ್ ಮಾಡದಿದ್ರೆ ಹಿಂಗೆ. ನೀನ್ ಇನ್ನಾರ ಕುಡಿಯದ್ ಬುಟ್ಟ್ ಮಕ್ಕಳ್ನ ಲಾಯ್ಕ ನೋಡಿಕ. ಇರ್ದು ಎರಡ್ ಗಂಡ್ ಮಕ್ಕ ಹಂಞ ಸಮೆ ಮತ್ತ್ ಹೆಂಗಾರ ಬದ್ಕಿಕಂಡವೆ. ಹಂಗೆತ ಅವರ್ನ ಕೆಲ್ಸಕೆ ಹಾಕ್ ಬಡ. ಲಾಯ್ಕ ಓದ್ಸು. ಸರಕಾರಿ ಶಾಲೆಲಿ ವಳ್ಳ ವಿದ್ಯಾಭ್ಯಾಸ ಕೊಟ್ಟವೆ. ಸರಕಾರನೇ ಊಟ, ಪುಸ್ತಕಂದ ಹಿಡ್ದ್ ಎಲ್ಲಾ ಅನುಕೂಲ ಮಾಡಿಕೊಟ್ಟುಟ್ಟು. ನಾನ್ ನಿಂಗೆ ಕೈಲಾದ ಸಹಾಯ ಮಾಡ್ನೆ. ಎಲ್ಲಾ ಕಳ್ದ ಮ್ಯಾಲೆ ಕೆಲ್ಸಕೆ ಬಾ" ತೇಳಿ ಶಂಕರ ಅಲ್ಲಿಂದ ಹೊರ್ಟೊ.

---

**ಲಲಿತಾ ಕಟ್ರತನ**

ಮಡಿಕೇರಿ




# ತಾವೂರ ಶಕ್ತಿದೇವತೆ ಮಹಿಷಾಸುರಮರ್ದಿನಿ ತಾಯಿಯ ಮಹಾತ್ಮೆ

● ಸೂರಜ್ ಅಮೆಮನೆ

ಹಿಂದೆನ ಕಾಲಲಿ ಚೋಳರ್‌ತ ಹೇಳುವ ರಾಜರ್ ಇದ್ದೊ. ಅವರ್ದ್ ಬಾರಿ ದೊಡ್ಡ ರಾಜ್ಯ ಇತ್ತ್‌ತ ನಾವು ಪಾಠಲಿ, ಕತೆಲಿ ಕೇಳಿ ತಿಳ್ಕೊಂಡೊಳೊ. ಆದರೆ, ಅವರ ದೇಶ ನಾಶ ಆದ ಮೇಲೆ ನಮ್ಮ ಕೊಡಗ್‌ನ ಕತೆ ಎಂತಾತ್ ಗೊತ್ತಾ?

ಹೇಳಿಕೇಳಿ ಕೊಡಗ್ ಗುಡ್ಡೆಗಾಡ್‌ಂದ ತುಂಬಿದ ಜಾಗ. ಅವು ಬುಟ್ಟ್ ಹೋದ ಮೇಲೆ ಬಲ್ಲೆ ಕಾಡ್ ಕೂಡಿ ಹೋಗಿತ್ತ್‌ಗಡ.

ಮತ್ತೆ ಕೊಡ್ಗುಲಿ ಅಲ್ಲಲ್ಲಿ ಸಣ್ಣಸಣ್ಣ ಪಾಳೇಗಾರರ್, ರಾಜರ್ ಅಲ್ಲಲ್ಲಿ ರಾಜ್ಯಭಾರ ಮಾಡಿಕಂಡ್ ಇದ್ದೊಗಡ. ಹತ್ತು ಕುಟುಂಬ ಹದಿನೆಂಟು ಗೋತ್ರದ ಗೌಡ ಮನೆತನದವು ತಾವುನಾಡ್‌ತ ಹೇಳುವಲ್ಲಿ ಗದ್ದೆ ಮಾಡಿಕಂಡ್ ಇದ್ದೊ.





ಆಗನವು ಗದ್ದೆ ಹೂಡ್ದು ಅಂದರೆ ಈಗನವರ ತರ 7 ಗಂಟೆಗೆ ಹೋಗಿ 9 ಗಂಟೆಗೆ ಬರ್ತಿದ್ದದ್ ಅಲ್ಲ. ಅವು 3 ಗಂಟೆ ರಾತ್ರೆಗೆನೇ ಗದ್ದೆಗೆ ಇಳಿತಿದ್ದೊಗಡ. ತಾವುನಾಡ್ ಮತ್ತೆ ತಾವೂರು, ಭಾಗಮಂಡಲ ಆಗಿ ಬೇರೆ ಬೇರೆ ಆಗುಟು.

ಆಗ ತಾವೂರು (ತಾವುನಾಡ್) ಬೆಟ್ಟದ್ ತಪ್ಪಲಿನ ದಿಬ್ಬದ ಮೇಲೆ ಒಂದು ರಾಜಮನೆತನ ಇತ್ತ್‌ಗಡ. ಅದರ ಕೆಳಗೆನೇ ಒಂದು ಗದ್ದೆಗೆ ಕುರುಂಜಿ ಮನೆವು ಗದ್ದೆ ಹೂಡಿಕೆ 3 ಗಂಟೆಗೆ ಹೋಗೊಳೊ. ಹಿಂಗೆ ಹೂಡಕನ ಗದ್ದೆ ಬೈಲ್ ಹತ್ರ ಇರುವ ಕಾಡ್‌ಂದ ಬಿಳಿ ಬಣ್ಣದ ಬೆಳಕು ಕಂಡುಟು. ಆಗ ಕುರುಂಜಿ ಅವು ಅದೇ ವಿಷ್ಯನ ಅವರ ಮನೆ ಹತ್ರ ಇದ್ದ ಬಾರಿಕೆ ಮನೆವ್ಕೆ ವಿಷ್ಯ ಮುಟ್ಟುಸ್ಯೊಳೊ. ಅವ್ಕೆ ಹೇಳ್ಕನ ಅವು ಆಗ ಬೆಳಕ್ ಇಲ್ಲದಿರ್ಕನ ದೆವ್ವ ಕಾಟ ಜಾಸ್ತಿ ಇತ್ತಲ ಅದ್ಕೆ ಅದು ಒಂತರ ಕೊಲೆ ಪೀಡೆ ಆಗಿರ್ದುತ ಹೇಳ್ಯೊಳೊ. ಆದ್ರೆ ಕುರುಂಜಿ ಅವ್ಕೆ ಎಷ್ಟಾದರೂ ಮನಸ್ ಕೇಳ್‌ತ್ಲೆ. ಅವು ಅದೇ ವಿಷ್ಯನ ಅಮೆ ಮನೆವ್ಕೆ ಹೇಳ್ಕನ, ಅವು ಮನೆ ಹತ್ರ ಹೊಸಗದ್ದೆ ಮನೆವುಸ ಒಳೊ. ಅವರ್‍ನಸ ಕರ್ಕಂಡ್ ಬಂದವೆತ ಹೇಳಿ 3 ಮನೆವು ಒಂದು ದಿನ ಗೊತ್ತು ಮಾಡಿಕಂಡ್ ಬೆಳಕ್ ಕಂಡಲ್ಲಿಗೆ ನೋಡಿಕೆ ಬಂದೊಳೊ. ಕಾಡ್ ಬಲ್ಲೆ ಬುಡ್ಸಿ ನೋಡ್ಕನ ಅಲ್ಲಿ ಒಂದು ದೇವಿ ವಿಗ್ರಹ ಕಂಡ್‌ಬಂದುಟು. ದೇವಿ ವಿಗ್ರಹ ಸಿಕ್ಕಿದ ತಕ್ಷಣ ಇವು ಮಾರನೇ ದಿನ ಲಾಯ್ಕ ಮಾಡಿ ಬಲ್ಲೆ ಎಲ್ಲ ಕಡ್ದ್ ಚೂನ ಎಲ್ಲ ಊರಿ ಚಪ್ಪರ ಹಾಕಿ ಮೂರ್ತಿ ಸಿಕ್ಕಿದ ಜಾಗಲೇ ಪೂಜೆ ಮಾಡಿಕೆ ಸುರು ಮಾಡ್ದೊಗಡ.

ಅದೇ ನಾವು ಈಗ ನೋಡ್ತಾ ಇರುವ ಶ್ರೀ ಮಹಿಷಾಸುರ ಮರ್ಧಿನಿ ದೇವರ ಮೂಲ ವಿಗ್ರಹ. ಆ ಮೂಲವಿಗ್ರಹ ಇಂದಿಗೂ ತಾವೂರು ಶ್ರೀದೇವಿಯ ದೇವಸ್ತಾನದ ಗರ್ಭಗುಡಿಲಿ ನೋಡಕ್.

ಹಿಂಗೆ ವಿಷಯ ಎಲ್ಲಾ ಮನೆವ್ಕೆ ಅಂದರೆ ಕುರುಂಜಿ, ಅಮೆ, ಹೊಸ ಗದ್ದೆ, ಗೌರ್ಡದಾರೆ, ಕೋಳಿಬೈಲ್, ಕೂಡಕಂಡಿ, ಚೆದುಕಾರ್, ಕುದುಕುಳಿ, ಎಳ್ಮೆಕಾಲ್, ಕಾವೇರಿಮನೆ, ಐಯ್ಯಣೀರ, ಕಾರ್ತೋಡಿ, ಬೆಳ್ಳಿಪಾಡಿ ಮನೆವೆಲ್ಲಾ ಸೇರಿ, ಶ್ರೀ ದೇವಿಯ ಹಬ್ಬ ಮಾಡಿಕೆ ಸುರು ಮಾಡ್ದೊ.

ಹಿಂಗೇ ಕಾಲಾನಂತರ ಅಲ್ಲೇ ಇದ್ದ ಅಂದರೆ ಈಗನ ತಾವೂರು ದೇವಸ್ಥಾನದ ಮುಂದೆ ಕಾಣುವ ದಿಬ್ಬದ ಮೇಲೆ ಇದ್ದ ಕರ್ಣಯ್ಯ ಬಾಹು ಅರಸ ಇದೇ ತಾಯಿ ಕ್ಷೇತ್ರಕೆ ಆನೆಗಳನ್ನ ಕರೆಸಿ ಆ ಜಾಗನ ಆನೆಕಾಲ್‌ಲಿ ಮೆಟ್ಟಿಸಿ ಒಂದು ಗರ್ಭಗುಡಿ ಮತ್ತೆ ಅದರ ಸುತ್ತ ಗೋಡೆ ಕಟ್ಟಿ

ಭಾವಣಿಗೆ ಹುಲ್ಲು ಹಾಕಿ ಲಾಯ್ಕ ಆಗಿ ಒಂದು ದೇವಸ್ತಾನ ಕಟ್ಟಿಸಿಕೊಟ್ಟ ಮಹಾಪುರುಷರ್‌ತ ಹೇಳಕ್. ಅವು ಕಟ್ಟಿಸಿದ ದೇವಸ್ಥಾನದ ಹೊರಗೋಡೆ ಈಗಳೂ ಉಟ್ಟು. ಭಾವಣಿನ ಮಾತ್ರ ಹಂಚಿಂದ ಮಾಡ್ಯೊಳೊ. ರಾಜರೇ ದೇವಸ್ತಾನದ ತಕ್ಕ ಸ್ಥಾನನ ಕುರುಂಜಿ ಅವ್ಕೆ ಕೊಟ್ಟದ್. ರಾಜರ ಕಾಲದ ಕುರುಹುಗಳ್ನ ನಾವು ಇಂದ್ ಕೂಡ ನೋಡಕ್. ಇಂದಿಗೂ ಬೇಡುಕಟ್ಟು ಮೂಲೆಲಿ ರಾಜರ ಕುದುರೆ ಕಟ್ಟುವ ಗುಳಿನ ಆ ಕಲ್ಲು ಮೇಲೆ ನೋಡಕ್. ಮತ್ತೆ ದಿಬ್ಬದ ಮೇಲೆ ಒಂದು ಸಣ್ಣ ಕೆರೆ ನೋಡಕ್. ಅದನ್ನ ರಾಜರ ಅರಮನೆಗೆ ನೀರಿಗೆ ಬಳಸ್ತಾ ಇದ್ದೊದ್ಗಡ. ಮತ್ತೆ ಕುದುರೆಗೆ ಆಹಾರ ಹಾಕಿಕೆ ಬಳಸ್ತಾ ಇದ್ದ ಕಲ್ಲುಸ ಇಂದಿಗೂ ತುಂಡಾಗಿ ಬಿದ್ದುಟು. ಇದಿಷ್ಟ್ ಕ್ಷೇತ್ರ ಪರಿಚಯ ಮತ್ತೆ ಕ್ಷೇತ್ರ ಬೆಳೆದು ಬಂದ ವಿಷಯ. ಆದರೆ ಈ ತಾಯಿನ ಶಕ್ತಿಗೆ ಕಥೆ ಉಟ್ಟು. ಈ ದೇವಸ್ಥಾನದ ತಕ್ಕ ಆಗಿ ಕೂಡಕಂಡಿ ಸೋಮಯ್ಯನವು ತುಂಬಾ ವರ್ಸ ಕೆಲ್‌ಸ ಮಾಡಿ ಮತ್ತೆ ಈಗ ಪುನಃ ಕುರುಂಜಿ ಮನೆವುಕ್ಕೆ ತಕ್ಕ ಸ್ಥಾನ ಕೊಟ್ಟೊಳೊ.

ಜಲದೇವಿ ಕಾವೇರಿ, ತಾವೂರಿನ ಮಹಿಷಾಸುರ ಮರ್ಧಿನಿ ತಾಯಿನೂ ಅಕ್ಕ–ತಂಗೆಗಡ. ಇವಿಬ್ಬರೂ ಭಾಗಮಂಡಲ ಸಂಗಮ ಹತ್ರ ಭೇಟಿ ಆಗಿದ್ದೊಗಡ. ತಾವೂರು ತಾಯಿ ಭೇಟಿ ಆಕೆ ಹೋಕನ ಅಲ್ಲಲ್ಲಿ ಕುದ್ದು ಹೋಗ್ತಿದ್ದೊಗಡ. ಆ ಜಾಗನ ಇಂದಿಗೂ ಕಟ್ಟೆ ರೀತಿಲಿ ಪೂಜಿಸ್ತಾ ಒಳೊ. ಹೊಸಗದ್ದೆ ಕಟ್ಟೆ, ಪಂಜುಕೋಡಿ ಕಟ್ಟೆ ಮತ್ತೆ ಕಾವೇರಿ ಹೊಳೆ ಹತ್ರ ಇರುವ ಕಟ್ಟೆ ಆಗಿ ಪೂಜಿಸ್ತಾ ಒಳೊ. 1985ರಲ್ಲಿ ಒಬ್ಬ ಕಳ್ಳ ತಾವೂರು ದೇವಸ್ಥಾನಂದ ತಾಯಿ ಮೂರ್ತಿನ ಕದ್ದುಕಂಡ್ ಹೋಗಿತ್ತ್‌ಗಡ. ಆಗ ಆ ತಾಯಿನ ಶಕ್ತಿನೋ, ತಾಯಿನ ಇಚ್ಚೆನೋ, ಅವನ ತಾವೂರು ಗಡಿ ದಾಟದಂಗೆ ಮಾಡಿ ಈಗನ ಐಬಿ ಜಂಕ್ಷನ್ ಹತ್ರ ಇರುವ ಕಟ್ಟೆ ಅಂದರೆ ಆಗ ಆ ಜಾಗ ಚರ್ಮೆಗೆ ಎಲ್ಲ ಇದ್ದ ಕಾಡ್ ತರ ಇತ್ತ್. ಅದೇ ಜಾಗಲಿ ಆ ಕಳ್ಳ ಮೂರ್ತಿನ ಇಟ್ಟ್ ಪರಾರಿ ಆಗುಟು. ಅದ್ಕೆ ಆ ಜಾಗನ ಕಟ್ಟೆ ಆಗಿ ಮಾಡಿ ದೇವಿ ಹಬ್ಬದ ಆರಾಟ ದಿನ ಕಾವೇರಿ ಸಂಗಮಕ್ಕೆ ಅವಭೃಥ ಸ್ನಾನಕ್ಕೆ ಹೋಕನ ಎಲ್ಲ ಕಟ್ಟೆಗೆ ಪೂಜೆ ನಡ್ದದೆ.

ಹಿಂಗೆ ತಾವೂರು ತಾಯಿ ಕಾವೇರಿನ ಭೇಟಿ ಮಾಡಿಕೆ ಹೋಕನ ಒಂದು ದಿನ ಭಗಂಡೇಶ್ವರ ದೇವಸ್ಥಾನಲಿ ಕಾವೇರಿ ತಾಯಿ ಇತ್ತ್‌ಲೆಗಡ. ಕಾವೇರಿ ಇಲ್ಲದರೂ ಭಗಂಡೇಶ್ವರ ದೇವಸ್ಥಾನ ಬಾಗಿಲ್ ಹಾಕಿದ್ದರೂ, ಸುಬ್ರಹ್ಮಣ್ಯ ದೇವರ ಬಾಗಿಲ ತೆರೆದಿತ್ತ್‌ಗಡ. ಅದರ ಮೂಲಕ ದೇವಿ ಒಳಗೆ

ಹೋದರೂ ದೇವಿ ಇಲ್ಲದಿರ್ದು ನೋಡಿ ತಾವೂರು ತಾಯಿಗೆ ಸಿಟ್ಟು ಬಂದು, ಅಲ್ಲಿಂದ ಸೀದಾ ತಾವೂರಿಗೆ ಓಡಿ ಬಂದುವೆಗಡ. ಆ ತಾಯಿನ ಸಿಟ್ಟ್‌ನ ಸಾಂತ್ವನ ಮಾಡಿಕೆ ಇಂದಿಗೂ ಅವಭೃತ ಸ್ನಾನಕ್ಕೆ ಹೋಗುವ ದಿನ ದೇವಿ ಬಲಿ ಸುಬ್ರಹ್ಮಣ್ಯ ದೇವರ ಬಾಗಿಲ ಮೂಲಕ ಹೋಗಿ ಅಲ್ಲಿ ದೇವಿನ ಮರದ ಉಯ್ಯಾಲೆಲಿ ತೂಗಿ ಸಾಂತ್ವನ ಮಾಡುವ ಕ್ರಮ ಉಟ್ಟು.

ಮತ್ತೆ ಅಲ್ಲಿಂದ ಓಡಿಕಂಡ್ ಬಂದ್ ತಾವೂರು ದೇವಸ್ಥಾನಲಿ ದರ್ಶನ ಬಲಿ ಆಗಿ ತಾಯಿನ ಹಬ್ಬ ಮುಗ್ದಗೆ.

ಕುಬೇರ ಮುನಿಗೆ ತಪಸ್ಸು ಮಾಡಿಕೆ ಬ್ರಹ್ಮಗಿರಿ ಕುಸಿ ಆದ್‌ರ್‌ಂದ ಅಲ್ಲೇ ತಪಸ್ಸ್ ಮಾಡ್ದಕ್ಕೆ ಕಾವೇರಿ ಮಗಳಾಗಿ ಸಿಕ್ಕಿ ಅಲ್ಲೇ ಕಾವೇರಿ ಹರಿದರ್‌ಂದಾಗಿ ಬ್ರಹ್ಮಗಿರಿ ಪ್ರಸಿದ್ಧ. ಆದರೂ ಇಲ್ಲಿನ ಸ್ಥಳೀಯರ್ ಬ್ರಹ್ಮಗಿರಿನ ಯಾಕೆ ಭತ್ತಕೆ ಹೋಲ್ಸುವೆ ಅಂದರೆ ಕಾವೇರಿ ತಾಯಿ ಮತ್ತೆ ತಾವೂರು ತಾಯಿ ಅಕ್ಕ-ತಂಗೆ ತರತ ಹೇಳ್ದಂಗೆ, ಬ್ರಹ್ಮಗಿರಿಲಿ ಕಾವೇರಿ ನೆಲೆನಿತ್ತದ್, ತಾವೂರುಲಿ ಮಹಿಷಾಸುರ ಮರ್ಧಿನಿ ನೆಲೆ ನಿತ್ತದ್. ಎರಡೂ ತಾಯಿಯರ್ ಬೆಟ್ಟದ ಒಂದು ತಪ್ಪಲ್ ಜಾಗಲಿ ನೆಲೆ ನಿತ್ತವು. ಬ್ರಹ್ಮಗಿರಿ ಭತ್ತ ಆದರೆ, ತಾವೂರು ಬೆಟ್ಟ ಅಕ್ಕಿಗಡ. ಅಂದರೆ, ಎರಡೂ ಬೆಟ್ಟದ ಎತ್ತರಕೆ ತುಂಬಾ ಏನ್ ವ್ಯತ್ಯಾಸ ಇಲ್ಲೆತ. ಬ್ರಹ್ಮಗಿರಿ ತುದಿಲಿ ನಿತ್ತ್ ನೋಡ್ರೆ ತಾವೂರು ಬೆಟ್ಟ ನೋಡ್ಕನ ನೀವ್‌ಗೆ ಅರ್ತ ಆದು.

ಮಹಿಷಾಸುರ ರಾಕ್ಷಸನ ಕೊಂದವ್ಳು ಮಹಿಷಾಸುರ ಮರ್ಧಿನಿ ತಾಯಿ. ಕೊಲ್ಲುಕನ ಈ ತಾಯಿಗೆ ಜೊತೆಲಿ ದೂತರ್‌ಸ ಇದ್ದೊಗಡ. ಈ ದೂತರ್ ಪಂಡ್ ಕಾಲಲಿ, ಹಬ್ಬದಿನ ದೇವಸ್ತಾನ ಸುತ್ತ ಓಡಿ ಬರ್ತಿದ್ದೊತ ಅಜ್ಜಂದರ್ ಹೇಳ್ತಿದ್ದೊ.

ದೇವಿನ ಶಕ್ತಿನ ಪಕ್ಕದ ಗ್ರಾಮಕೆ ವರ್ಗಾಯಿಸಿಕೆ ಪ್ರಯತ್ನ ಪಟ್ಟೊಗಡ. ಆದರೆ, ಈ ದೇವಿಯ ದೂತರ್ ಬುಟ್ಟತ್ಲೆ. ದೂತರ್ ಅವರ್ನ ತಡ್‌ದೊಳೊ. ಹಂಗೆ ದೂತರ್ ಅದೇ ಸಮಯಲಿ ಈ ದೇವಸ್ತಾನದ ತಕ್ಕರ (ಕುರುಂಜಿ) ಮನೆ ಬಾಗಿಲ್ ಬೊಡ್ಡ್‌ದಗಡ. ಜೊತೆಗೆ ಈ ಊರಿಡೀ ಇದ್ದ ಮನೆಗಳ ಬಾಗಿಲ್ ಬಡ್ದ್ ಎಚ್ಚರ್ಸಿದ್ದೊಗಡ. ಏನೇ ಆದರೂ ಆ ದೂತರ್ ಅವರ್ನ ತಾಯಿಶಕ್ತಿ ವರ್ಗಾಯಿಸಿಕೆ ಬುಟ್ಟತ್ಲೆ. ಆಗ ಅವು ತಾಯಿಶಕ್ತಿನ ಅಲ್ಲೇ ಬುಟ್ಟು ಹೋದೊಗಡ. ಆ ಜಾಗದ ಹೆಸರ್, ಪರಮೇಶ್ವರ ಬಕ್ಕತ. ಈಗಳೂ ಈ ತಾಯಿನ ಶಕ್ತಿ ಅಲ್ಲಿ ಒಳದ್‌ತ ಹೇಳುವೆ. ಅದ್ಕೆನೇ ದೇವಿಹಬ್ಬ ನಡಿಯಕೆ ಮುಂಚೆ ಅಂದರೆ ಏಪ್ರಿಲ್ 25ಕ್ಕೆ 'ದೇವರು ತಾದು'ದ ಒಂದು ಕ್ರಮ ಮಾಡುವೆ.

ಶ್ರೀ ತಾಯಿಗೆ ಊರುಸುತ್ತಾ ದೈವಗ ಒಳೊ. ದೇವಂಗೋಡಿ ದೇವರು ಗದ್ದೆಲಿ ಅಯ್ಯಪ್ಪನ ಬನ, ಅಮೆ ಜಾಗಲಿ ಶಾಸ್ತಾವು ಬನ, ಹೊಸಗದ್ದೆಲಿ ಕುಂಞಬೊಳು, ಕೋಳಿಬೈಲ್ ಮತ್ತೆ ಕೂಡಕಂಡಿಲಿ ವಿಷ್ಣುಮೂರ್ತಿ ಸ್ಥಾನಗ ಒಳೊ. ಹಬ್ಬಕೆ ಮುಂದೆ ದೊಡ್ಡ ಪಟ್ಟಣಿ ದಿನ ಅಮೆ ಶಾಸ್ತಾವು ಮತ್ತೆ ಅಯ್ಯಪ್ಪ ಬನಕೆ ಬನ ಪೂಜೆ ಆದೆ. ಬಾಕಿ ಜಾಗಗಳಲಿ (ವರ್ಷಾವಧಿ) ಕಲಯ ಕೊಟ್ಟವೆ.

ತಾಯಿಯ ಮಹಿಮೆಯಿಂದಾಗಿ ಇಂದಿಗೂ ತಾವೂರುಲಿ ಯಾವುದೇ ರೀತಿ ಅಹಿತಕರ ಘಟನೆ ಆಕೆ ಶ್ರೀ ತಾಯಿಶಕ್ತಿ ಬುಟ್ಟತ್ಲೆ. ತನ್ನ ನಂಬಿದ ಭಕ್ತರನ್ನ ಈ ತಾಯಿ ಯಾವತ್ತೂ ಕೈಬುಟ್ಟತ್ಲೆ.

ಶ್ರೀ ಕ್ಷೇತ್ರಲಿ ಏಪ್ರಿಲ್ 25ಕ್ಕೆ ಹೀಲಿಯಾಟಂದ ಶುರುವಾಗಿ ಮೇ 5ಕ್ಕೆ ದೊಡ್ಡ ಹಬ್ಬ ಆಗಿ 6ಕ್ಕೆ ಆರಾಟ ಆಗಿ, ಹಬ್ಬದ ಕಟ್ಟು ಮುಗ್ದಗೆ. ಎರಡು ವರ್ಷಕ್ಕೆ ಒಮ್ಮೆ ಚೌಂಡಿ ಮೇಲೇರಿ ದೇವಸ್ಥಾನದ ಮುಂದಿನ ಗದ್ದೆಲಿ ನಡ್ದದೆ. ದೇವಿಯ ಹಬ್ಬದ ದಿನ ಅಜ್ಜಪ್ಪ ದೇವರು, ಮಹಾವಿಷ್ಣು ದೇವರುಗ ಸಹ ಮೈಮೇಲೆ ಬಂದ್ ದರ್ಶನ ಕೊಡ್‌ತಿದ್ದೊ.

ಶ್ರೀ ಕ್ಷೇತ್ರಲಿ ಮೇ 5ಕ್ಕೆ ಭಕ್ತರ ಶರೀರದ ಅಂಗಾಂಗ ಯಾವುದೇ ಬೇನೆ ಆದರೆ, ಆಯಾ ಅಂಗಾಂಗಗಳ ಬೆಳಕು ಸೇವೆ, ಮದುವೆ ಸಮಸ್ಯೆ ಆದರೆ ಗಂಡುಕೋಲ–ಹೆಣ್ಣುಕೋಲ, ತುಲಾಭಾರ ಸೇವೆ, ಬೇಡುಕೋಲ – ಹಿಂಗೆ ಹರಕೆ ಸೇವೆಗ ನಡ್ದದೆ. ಹಂಗೆ ಯಾವುದೇ ಮನೆಲಿ ನಾಯಿಗಳಿಗೆ ತೊಂದರೆ ಆದರೆ ಅಮೆಯವರ ಜಾಗಲಿ ಇರುವ ಅಯ್ಯಪ್ಪ ಬನಕೆ ನಾಯಿದ್ ಮೊಣ್ಣುನ ಮೂರ್ತಿ ಕೊಟ್ಟರೆ ನಾಯಿಗಳಿಗೆ ಆಗುವ ತೊಂದರೆ ನಿವಾರಣೆ ಆದೆ. ಮದುವೆ ಆಗದವುಕ್ಕೆ ಮದುವೆ ಆದೆ. ಮಕ್ಕ ಆಗದವುಕ್ಕೆ ಮಕ್ಕ ಆದೆ.

ತಾಯಿನ ಶಕ್ತಿ ತುಂಬ ಇರ್‌ದರ್‌ಂದ ಹಬ್ಬಲಿ ತುಂಬಾ ಜನ ಸೇರಿವೆ. ಈ ತಾಯಿಯ ಹಬ್ಬ ಕೊಡಗ್‌ನ ಕೊನೆ ಊರು ಹಬ್ಬ ಆಗಿರುದರ್‌ಂದ ಕೊಡಗ್‌ನ ಎಲ್ಲಾ ಕಡೆಂದ ಭಕ್ತರ್ ಬಂದ್ ತಾಯಿನ ಆಶೀರ್ವಾದ ಪಡಕಂಡವೆ.

ಇನ್ನು ದೇವಸ್ಥಾನದ ಕತೆನ ವೀಡಿಯೋ ರೂಪಲಿ ನೋಡೊಕುಂತೇಳಿರೆ ಯೂಟ್ಯೂಬ್‌ಲಿ "Thavoor Temple, unknown history revealed' ತ Tour Doc Kannadiga ಚಾನಲ್‌ಲಿ ಉಟ್ಟು.

**ಸೂರಜ್ ಅಮೆಮನೆ**
ತಾವೂರು ಗ್ರಾಮ, ಭಾಗಮಂಡಲ ಮೊಬೈಲ್ : 7892059815




# ಯಾರಿಗೂ ಹೇಳ್ಬಡಿ

● ಜಯಪ್ರಕಾಶ್ ಮೋಂಟಡ್ಕ

ಮಳೆಗಾಲದ ಬಿಸಿಂದ ಎರಡ್ ಮೂರ್ ದಿನ ಸಕೆಲಿ ದಿನ ದೂಡ್ತಾ ಇರುವ ಇಂದ್‌ನ ದಿನ ಯಾಕೋ ವಿಚಿತ್ರ ದಿನ ಆಗಿ ಕಂಡತ್. ನಮ್ಮಲ್ಲಿ ಟಿ.ವಿ ಲಿ ಕಾರ್ಯಕ್ರಮ ಬರ್ತಾ ಇತ್ತ್. ನನ್ನ ಹೆಣ್ಣ್ ಟಿ.ವಿ ನೋಡ್ತಾ ಇತ್ತ್. ಅರೆ ಇದೇನಪ್ಪ ಬೆಳ್ಳಂಬೆಳಗೆ ಟಿ.ವಿ ನೋಡ್ತಾ ಉಟ್ಟು. ಬಹುಶಃ ನಿದ್ದೆ ಬಾರದೆ ಬೇಗ ಎದ್ದ್ ಟಿ. ವಿ ನೋಡ್ತಾ ಇರಕುಂತ ನೆನ್ಸಿ ಹೊರಗೆ ಬಂದೆ. ಕತ್ತಲೆ ಕತ್ತಲೆ ಇತ್ತ್. ಮಾಮೂಲ್ ಬೊಳ್ಪು ಆತ್, ನಾ ಬೇಗ ಎದ್ದೆ ಅಲ್ಲಾನೊಂತ ನನ್ನಷ್ಟಕ್ಕೆ ಗೊಣಗಿಕಂಡೆ.

ಸರಿ ಹೆಂಗಾರ್ ಬೇಗ ಎದ್ದೊಳೆ ಅಲ್ಲ. ಸುಮಾರ್ ದಿನಂದ ನಮ್ಮ ಮುದ್ದ್‌ನ ನಾಯಿ ಲೂನ ನ ಯಾಗೋಳು ಬೆಳಿಗ್ಗೆ ವಾಕಿಂಗ್ ಕರ್ಕಂಡ್ ಹೋಕುಂತ ಹೇಳುವ ಯೋಚನೆಗೆ ಇಂದ್ ಕೈ ಹಾಕಮಂತ ಲೂನನ ಹಿಡ್ಕಂಡ್ ವಾಕಿಂಗ್ ಹೋಕೆ ತಯಾರಾದೆ. ಅಷ್ಟ್ ಹೊತ್ತಿಗೆ ನನ್ನ ಅರಂಬೂರ್ ಬಾವ ಕೆಮ್ಮಿಗೆ ಬೆಳಿಗ್ಗೆ ತುಳಸಿ ಕೊಡಿನ ಬಾಯಿಗೆ ಹಾಕಿ ಅಗ್ದ್ ತಿನ್ನೊಕೂಂತ ಹೇಳಿದ್ದೊ. ಹಂಗೆ ಹೆಂಗೂ ಎದ್ದೊಳೆ ಇಂದ್‌ಂದ ಸುರು ಮಾಡಮೋಂತ ತುಳಸಿ ಕೊಡಿನ ಬಾರೀ ಕುಸಿಲಿ ತಿಂದೆ. ಒಟ್ಟಿಗೆ ನಾಯಿನ ಒಂದು ಬೆತ್ತದೊಂದಿಗೆ ಹೋಕನ ಬೇರೆ ನಾಯಿಗ ಬಂದರೆ ಓಡ್ಸಿಕೆಂತ ಹಿಡ್ಕಂಡೆ. ಲೂನನ ಗೇಟ್‌ಂದ ಹೊರಗೆ ಕರ್ಕಂಡ್ ಹೋದ್ದ್ ಒಂದೆ ಕುಸಿ. ಅದಕ್ಕಂತು ಕುಸಿಯೇ ಕುಸಿ. ಇದ್ದ ದೈಯಿಗಳ ಮೂಸಿಕಂಡ್ ಅತ್ತ ಇತ್ತ ನೋಡಿಕಂಡ್ ನನ್ನೊಟ್ಟಿಗೆ ಬಾರೀ ಕುಸಿಲಿ ಹೆಜ್ಜೆ ಹಾಕಿತ್. ನಂಗೂ ಕುಸಿಯೋ ಕುಸಿ. ನಾ ಇಂದ್ ನಮ್ಮ ಮುದ್ದಿನ ನಾಯಿನ ವಾಕಿಂಗ್ ಕರ್ಕಂಡ್ ಹೋದೆಲ್ಲಾ ಅಂತ. ಎಲ್ಲಿ ಬೇರೆ ನಾಯಿಗ ಬಂದ್ ಕಚ್ಚುವೆಂತ ಹೆದರಿಕೆ ಬೇರೆ. ಅದಲ್ಲೂ ನನ್ನ ಕೈಲಿದ್ದ ಕೋಲ್‌ಂದ ಬಲ್ಲೆಗಳಿಗೆ, ನೆಲಕ್ಕೆ ಹೊಡ್ಕಂಡ್ ಹೋದೆ. ಯಾಕೆಂದರೆ ನಾಯಿಗೆ ಯಾಗೊಳು ಜ್ಞಾಪನಾ ಶಕ್ತಿ ಜಾಸ್ತಿ ಉಟ್ಟಲ್ಲ. ಹಂಗೆ ಅಕಸ್ಮಾತ್ ಅಪ್ಪಿ ತಪ್ಪಿ ಹೊರಗೆ ಬಂದರೆ ಜಾಗದ ನೆನ್ಪು ಇರ್ಲಿಂತ ನನ್ನದೊಂದ್ ಆಲೋಚನೆ. ಅಂತು ನಾಯಿನ ಗೇಟ್‌ಂದ ಬೊಳ್ಪೊಳ್ಪಿಗೆ ವಾಕಿಂಗ್ ಕರ್ಕಂಡ್ ಬಂದ ಕುಸಿ ಬೇರೆ. ಖಾಲಿ ಚಡ್ಡಿಲಿ ನಾ ಒಳೆ. ಹಿಂಗೆ ಹೋಕಂಡ್ ಇರ್ಕನ ನನ್ನ ಹಿಂದೆಂದ ಬೈಕೊಂದು

ಬಾತ್.ಇದೇನಪ್ಪ ಇಷ್ಟ್ ಬೆಳಿಗ್ಗೆ ಯಾರ್ ಹೋಗ್ತಾ ಒಳಂತ ಯೋಚಿಸಿ ನಾಯಿಗೆ ಕಟ್ಟಿದ ಸಂಕೋಲೆನ ಸಣ್ಣದ್ ಮಾಡಿಕಂಡೆ. ಯಾಕೆಂತೇಳಿರೆ ನಾಯಿ ಬೊಳ್ಪುನ ವಾಕಿಂಗ್ ಸುರು ಬಾದೊಲ್ಲ. ಹಂಗೆ ಹೆದರಿಕಂಡ್ ಪೆರ್ಚಿಕೆ ಬೊತ್ತಲ್ಲ. ಇದ್ ನನ್ನ ಆಲೋಚನೆ. ಅಂತು ಇಂತು ಹೆದರಿಕೆಂದ ಬೆಳ್ಳಂಬೆಳಗೆ ನಾಯಿನ ವಾಕಿಂಗ್ ಕರ್ಕಂಡ್ ಇಂದಾದರ್ ಕರ್ಕಂಡ್ ಹೋದೆಲ್ಲ ಕುಸಿ ಬೇರೆ. ಹಂಗೆ ನಮ್ಮ ಮಾರ್ಗಲಿ ಒಂದು ಫರ್ಲಾಂಗ್ ಹೋದರೆ ಮುಖ್ಯ ಮಾರ್ಗ ಸಿಕ್ಕಿದೆ. ಅಲ್ಲಿ ಹೋಟೆಲ್ ಅಂಗಡಿಗ ಒಳ. ಅಲ್ಲಿಗೆ ಎತ್ತಿಕನ ಅಂಗಡಿಗ ಹೋಟೆಲ್ ಎಲ್ಲಾ ಲೈಟ್ ಹಾಕಂಡ್ ಉಟ್ಟು. ನಂಗೆ ಆಶ್ಚರ್ಯ ಆತ್. ಇದೇನಪ್ಪ ಇಷ್ಟ್ ಬೆಳ್ಗೆ ಅಂಗಡಿ ಹೋಟೆಲ್ ಓಪನ್ ಆಗುಟಲ್ಲಾಂತ. ನಾ ನೆನ್ಸಿಕಂಡೆ ಕೊರಾನಕ್ಕಾಗಿ ಬೆಳಿಗ್ಗೆ ಬೇಗ ಓಪನ್  ಮಾಡ್ಯೊ ತಿಳ್ಕಂಡೆ. ಅಂತು ಅಲ್ಲಿಯವರ್ಗೆ ನಾಯಿನ ಕರ್ಕಂಡ್ ಹೋತ್ಲೆ. ಯಾಕೆಂತೇಳ್ರೆ ನಾ ಬರಿ ಮೈಲಿ ಒಳೆ ಅಲ್ಲ ಹಂಗೆ. ವಾಪಾಸ್ ತಿರ್ಗಿ ನಾಯಿನ ಬಾರೀ ಕುಸಿಲಿ ಕರ್ಕಂಡ್ ಬಂದೆ. ಯಾಕೆಂತ ಹೇಳ್ರೆ ನಾ ಇಂದ್ ಸುರ್‌ಲಿ ನಮ್ಮ ನಾಯಿನ ವಾಕಿಂಗ್ ಕರ್ಕಂಡ್ ಬಂದೊಳೆ ಅಲ್ಲ. ಆ ಕುಸಿಲಿ. ವಾಪಾಸ್ ಬಾಕನ ನಮ್ಮ ಮನೆ ಪಕ್ಕದ ಆಂಟಿ ಮನೆ ಹೊರಗೆ ಇದ್ದ. ಅವ್ಕೆ ನಮಸ್ತೆ ಬೇರೆ ಹೇಳಿದ್ದೆ. ಯಾಕೆಂತ ಹೇಳಿರೆ ಬೆಳಿಗ್ಗೆ ಹೇಳುವ ಕ್ರಮ ಉಟ್ಟಲ್ಲ ಹಂಗೆ. ನಮ್ಮ ಮನೆ ಗೇಟ್‌ನ ಹಕ್ಕಲೆ ಬಾಕನ ಒಂದು ಯೋಚನೆ ಆತ್. ಯಾಗೊಳು ಕತ್ತಲೆ ನಾ ಗೇಟ್ ಹಾಕಿನೆ. ನಿನ್ನೆ ಯಾಕೆ ಹಾಕಿತ್ಲೆ ಅಂತ. ಅದರ ಮರ್ತ್ ನಾಯಿನ ಮನೆಗೆ ಕರ್ಕಂಡ್ ಬಂದೆ. ನಂಗೆ ಕುಸಿಯೋ ಕುಸಿ. ನಾ ಇಂದ್ ದೊಡ್ಡ ಸಾದನೆ ಮಾಡ್ದೆಂತ. ಹಂಗೆ ಬಂದವನೆ ನನ್ನ ಹೆಣ್ಣ್ ನೊಟ್ಟಿಗೆ ಕೇಳ್ದೆ. ಏನ್ಯಾ ಬೊಳ್ಪೊಳ್ಗಿಗೆ ಟಿ. ವಿ ಹಾಕಂಡ್ ಕುದ್ದೊಳೋಂತ. ಬಹುಶಃ ಅವಳಿಗೆ ನಾ ಕೇಳ್ದ್ ಸರಿ ಅರ್ತ ಆತ್ಲೆಂತ ಕಂಡದೆ. ಆದರೂ ನಂಗೆನೆ ಒಂದು ಸಂಶಯ ಬಾತ್. ಹೋಗಿ ಗಡಿಯಾರ ನೋಡ್ದೆ.ಮೊಬೈಲಿಲಿ ಗಂಟೆ ನೋಡ್ದೆ. ಆಗಷ್ಟೇ ಏಳುವರೆ ಗಂಟೆ ತೋರ್ಸ್ತಾ ಇತ್. ನಾ ನನ್ನಿಷ್ಟಕ್ಕೇ ನೆಗಾಡಿಕಂಡ್ ಇದ್ದೆ. ಯಾಕೆಂತ ಹೇಳ್ರೆ ಈಗ ರಾತ್ರಿ, ಬೊಳ್ಪುನ ಹೊತ್ತ್ ಅಲ್ಲಂತ. ಇಷ್ಟಕ್ಕೂ ಕಾರಣ ನಾ ಹಿಂಬೊತ್ತು ನಾಲ್ಕು ವರೆ ಗಂಟೆಗೆ ಮಲ್ಗಿದಂವ ಎದ್ದರ್ಕನ ಏಳ್ ಗಂಟೆ ಕಳ್ದಿತ್ತ್. ಯಾರಿಗೂ ಹೇಳ್ಬಡಿ.

---

**ಜಯಪ್ರಕಾಶ್ ಮೋಂಟಡ್ಕ**
ಕೌಸ್ತುಭ ನಿಲಯ, ಬಿಳಿನೆಲೆ ಗ್ರಾಮ, ನೆಟ್ಟಣ ಅಂಚೆ, ಕಡಬ ತಾಲೂಕು – 574230
9480293464

# ಕಡೇ ಕಾಲದ ಕಾಳಜಿ

● ಲೀಲಾ ದಯಾನಂದ ಕೊಟ್ಟಕೇರಿಯನ

"ಅಯ್ಯೋ, ಕಾಯಿಲೆ ಬಿದ್ದ್ ಕಟ್ಲ್ ಹಿಡ್‌ದವನಾದ್ರೂ ನೋಡಿಕಣಕ್, ಆದರೆ ಅವರ ನೋಡಿಕೆ ಬರುವವರ ನಿಬಾಯ್‌ಸುದು ಬಾಳ ಕಷ್ಟ"ತ ನನ್ನ ಸಿನೇತರು ಹೇಳಿಕಂಬದ್ ಕೇಳಿದ್ದೆ. ಅದೆಷ್ಟ್ ಸತ್ಯದ ಮಾತೂತ ಗೊತ್ತಾದ್ ನಂಗೇ ಅನುಬವಕೆ ಬಂದ ಮೇಲೆನೆ!

ಆರ್ ಜನ ಅಣ್ಣಂದ್‌ರಿಗೆ ಒಬ್ಬಳೇ ತಂಗಿಯಾಗಿತ್ತ್ ನನ್ನ ಅತ್ತೆ. ತುಂಬು ಸಂಸಾರ ಅವರ್‌ದ್. ನಾ ಮದುವೆಯಾದ ಸುರೂಲಿ ಅತ್ತೆ ಮನೆಗೆ ಹೋಕನೆಲ್ಲಾ ಜೇನ್ನೊಳಗಳಂಗೆ ಮುತ್ತಿಕಂಡಿರ್‌ತಿದ್ದ ನೆಂಟ್ರೂ, ಹೊತ್ತ್‌ಗೊತ್ತ್ ಇಲ್ಲದೆ ಅವ್‌ಕೆಲ್ಲಾ ಬೇಯಿಸಿ ಇಕ್ಕ್‌ತಿದ್ದ ಅತ್ತೆನೂ ನೋಡಿ ಆಶ್ಚರ್ಯ ಪಡ್‌ತಿದ್ದೆ. ಇವ್‌ಕೆಲ್ಲಿಂದ ಇಷ್ಟೊಂದ್ ತಾಳ್ಮೆ ಬಂದಿರ್‌ದೂತ ಗ್ಯಾನ ಮಾಡ್‌ತಿದ್ದೆ. ದಿನ ಇದ್ದಂಗೆ ದಿನ ಇರ್ದುಲೆಲಾ... ಹಂಗೆ "ನೀವೆಲ್ಲವೂ ತಿಂದ್ ಕುಸೀಲಿದ್ದರೆ ನಾನ್ ತಿಂದಂಗೇತ ಮನ್‌ಸಾರ್ ಹೇಳ್‌ತಿದ್ದ ನನ್ನ ಅತ್ತೆ ಕ್ರಮೇಣ ಕಾಯಿಲೆ ಬಿದ್ದೊ. ಹಳ್ಳಿ ಬದ್‌ಕ್‌ಲಿ ಎದೆ ಹೊಡಿ ಮಾಡಿಕಂಡ್ ಮನೆ-ತೋಟಾತ ಹಗ್‌ಲ್-ಇರ್ಲ್ ನೋಡದೆ ದುಡಿತಿದ್ದ ಜೀವ ಮಂಜನ ಮನೆ ಸೇರ್‌ತ್. ಪೇಟೆನ ಬದ್‌ಕ್‌ಗೆ ಒಗ್ಗಿಕಂಡರೂ ಸನ ಅವ್‌ಕೆ ಉಸಾರಿಲ್ಲದಾದೂ, ಆಸ್ಪತ್ರೆ ಸಾವಾಸಲಿ ಉಸಾರಾಗಿ ಬಾದೂ ಮಾಮೂಲಾತ್. ಹಿಂಗೆ ಎಷ್ಟೋ ಸತಿ ಮೇಲೆ ಹೋಗಿ ಕೆಳ್‌ಗೆ ಬಂದ ಗಟ್ಟಿ ಜೀವ ನನ್ನ ಅತ್ತೆ.

ಅವ್‌ರ ಬದ್‌ಕ್‌ನ ಕಡೇ ಮೂರು-ನಾಲ್ಕ್ ವರ್ಸಗಳ್‌ಲಿ ಅವ್ರ ನೆಂಪುನ ಸಕ್ತಿ ಕಮ್ಮಿಯಾತ್. ಆದರೂ ಸನ ಮುಂಬಾಗ್‌ಲ್ ಸದ್ದಾಕನ ಕಾಲೆಳ್‌ಕಂಡ್ ಎಳ್‌ಕಂಡ್ ಹೋಗಿ ಬಾಗ್ಲ್ ತೆಗ್‌ದ್ "ಬನ್ನಿ ಬನ್ನಿ.. ಉಸಾರೊಳ್‌ರೀ?"...ತ ರಾಗಲಿ ಕೇಳಿಕಂಡೇ ಬಂದವ್ ಉತ್ತರ್‌ಸಿಕೆ ಅವಕಾಸ ಕೊಡದೆನೇ "ಮಕ್ಕ ಎಷ್ಟ್ ನೀವ್‌ಗೇ"ತ ಕೇಳ್‌ತಿದ್ದೊ. ಆಚೆಂದ 'ಎರಡ್'ತ ಕೇಳ್‌ರೆ "ಒಂದು ಗೂಡೆ, ಒಂದ್ ಹೈದನಾ?"ತ ಜೊತೆಲೇ ಪ್ರಸ್ನೆ. ಅವರ ಈ ಅಬ್ಯಾಸದ ಬಗ್ಗೆ ಗೊತ್ತ್ ಮಾಡಿಕಂಡಿದ್ದ ನನ್ನ ಒಬ್ಬ ಸಿನೇತೆ ಒಳಗೆ ಬಂದಂಗೆನೇ "ಅಮ್ಮಾ, ನಂಗೆ ಇಬ್ಬರು ಮಕ್ಕ. ಇಬ್ಬರೂ ಗೂಡೆಗಳೇ"ತ ಹೇಳಿ ನಗಾಡ್‌ತಿತ್ತ್. ಬೇರೆ ಎಂತದೂ ಹೇಳಿಕೆ ಗೊತ್ತ್ ಸಆಲ್‌ದೆ

ಅತ್ತೆನೂ ಹೀ... ಹೀ... ತ ನಗಾಡಿಕಂಡ್ "ಯಾವ್‌ದಾದರೇನಲಾ? ಈ ಕಾಲಲಿ ಎಲ್ಲವೂ ಒಂದೇ. ಲಾಯ್‌ಕಲಿದ್ದರೆ ಆತ್"ತ ಪಿಲಾಸಪಿ ಬುಡ್‌ತಿದ್ದೊ! ನಂಗೆ ಎರಡ್‌ನೇದೂ ಹೆಣ್ಣ್ ಕೂಸಾಕನ ಸಿಟ್ಟ್‌ಲಿ ಮೊಕ ಗಂಟ್ ಹಾಕಿಕಂಡಿದ್ದ ನನ್ನ ಅತ್ತೆ ಇವೇನಾತ ನಾನ್ ಆಶ್ಚರ್ಯಲಿ ತಿರ್‌ಗಿ ನೋಡ್‌ತಿದ್ದೆ.

ಕಾಲ ಯಾರ್‌ನೂ ಬುಡ್‌ದುಲೆ... ಹಂಗೇ ವಯಸ್ಸ್ ಏರ್‌ದಂಗೆ, ಪ್ರಾಯ ತೊಂಬತ್ತ್ ದಾಟಿದಂಗೆ ಅತ್ತೆಗೆ ನಿತ್ರಾಣ ಸುರಾತ್. ನಡಿಯಕಾಗದೇ ಸುಮಾರು ಎರಡ್ ವರ್ಸಗಳಷ್ಟ್ ಕಟ್ಲ್‌ಲಿ ಕೂದ್ದ್‌ಕಂಡೇ ಇರ್‌ವಂಗಾತ್. ಆ ಸಮಯಲಿ ಬೆರಳೆಣಿಕೆಯಷ್ಟ್ ನೆಂಟಂಗ ಮಾತ್ರ ಬಂದ್ ಅತ್ತೆನ ಮಾತಾಡಿಸಿಕಂಡ್ ಹೋದೊ. ಯರಾದ್‌ರೂ ಬಂದರೆ ಅವ್‌ಕೆ ಬಾಳ ಕುಸಿ. ಮೊದ್‌ಲಿಂದನೂ ಅವರ ಸ್ವಭಾವ ಅದ್. ಮಾತಾಡ್‌ಸಿದಷ್ಟೂ, ತಿಂಬಕೆ ಕೊಟ್ಟಷ್ಟೂ ತೃಪ್ತಿ ಆಗ್‌ತಿತ್ಲೆ. ಹಂಗೆ ತಿಂದ್, ಕುಡ್‌ದ್ ಗೌಜಿ ಮಾಡ್‌ದವ್ ಯಾರೂ ಅವ್‌ಕೆ ಕೈಲಾಗದಿರ್‌ಕನ ಬಂದ್ ಕುದ್ದ್ ಮಾತಾಡ್‌ದ್ ಬಾರೀ ಅಪರೂಪ. ಅದ್‌ಕೇ ಕಂಡದೆ ಆ ದೇವ್‌ರು ಮರೆವಿನ ಕಾಯಿಲೆ ದಯಪಾಲ್‌ಸಿದ್ ಅವ್‌ಕೆ... ಇಲ್ಲದಿದ್ರೆ ಎಲ್ಲವ್‌ರ್‌ನ ನೆನ್‌ಸಿಕಂಡ್ ಅದೆಷ್ಟ್ ಕೊರಗ್‌ತಿದ್ದೊನೋತ ನಾನ್ ಗ್ಯಾವ ಮಾಡ್‌ತಿದ್ದೆ.

ಹಿಂದೇ ದಿನ ಹೋದಂಗೆ ಅವ್‌ಕೆ ಕುದ್ದ್‌ಕಣಿಕೂ ಆಗದಂಗೆ ಆತ್. ಬೆನ್ನ್ ಮೂಳೆ ಬಗ್ಗಿ ಹೋಗಿ ಬಿದ್ದ್ ಬುಡ್‌ತಿದ್ದೊ. ಅಲ್ಲಿಂದ ಹಾಸಿಗೆಲೇ ಮಲ್‌ಕಂಬಂಗೆ ಆತ್. ಇದ್‌ನ ನೋಡಿ ಕೆಲವು ನೆರೆಕರೆಯವು "ಅಲ್ಲಾ, ನಿಮ್ಮ ಅವ್ವ ಉಸಾರಾದು ಕಷ್ಟ ಕಂಡದೆ. ಅವ್‌ಕೆ ಬೇಕಾದವ್‌ಕೆಲ್ಲಾ ಒಂದ್ ಮಾತ್ ತಿಳ್‌ಸಿ ಬುಡಿ. ಹೇಳ್‌ತ್‌ಲೇತ ನಾಳೆ ದಿನಕೆ ಒಂದ್ ಮಾತ್ ಯಾಕೆ"ತ ಸಲಹೆ ಕೊಟ್ಟೊ. ಇದ್‌ನ ಕೇಳೇ ನನ್ನ ಅತ್ತೆನ ಒಬ್ಬನೇ ಮಂಜ ಒಂದು ಬರ ಪೋನಾಯಿಸಿಕೆ ಸುರು ಮಾಡ್‌ದೊ. ಅಲ್ಲಿಂದ ಸುರುವಾತ್ ನೋಡಿ ಈ ನೆಂಟರ ಕಾಳಜಿ!

ಸುದ್ದಿ ಕೇಳ್‌ದ ಮೇಲೆ ದಾಪ್‌ಗಾಲ್‌ಲಿ ಬಂದ ನೆಂಟಂಗ, ಅತ್ತೆನೆದುರೇ ಕುದ್ದ್‌ಕಂಡ್, "ತಿಂಬಕೆಲ್ಲಾ ಸರಿಯಾಗಿ ಕೊಟ್ಟವೆನಾ? ಛೇ... ಹೆಂಗಿದ್ದಿರಿ ನೋಡಿ ನೀವ್, ಎಷ್ಟೆಲ್ಲಾ ಮಾಡಿ ಇಕ್ಕ್‌ತಿದ್ದರಿ, ಈಗ ನೋಡಿ ಹೆಂಗಾಗಿ ಹೋದರೀ"ತ ಮೊಕ ಬಾಡ್‌ಸಿಕಂಡ್, "ಈ ಇಬ್ಬರೂ ಚಾಕರಿಗೆ ಹೋಗವು ಅದೆಷ್ಟ್ ಲಾಯ್‌ಕಲಿ ನೋಡಿಕೊಂಬೋ"ತ ನಂಗೆ ಕೇಳುವಂಗೆ ಗೊಣ್‌ಗಿಕಣ್‌ತಿದ್ದೊ.

ಹತ್ತ್-ಹನ್ನೆರ್‌ಡ್ ವರ್ಸಂದ ಅತ್ತೆನ ನೋಡಿಕೆ ಬಾರದಿದ್ದವು ಬಂದ್, "ಲಾಯಕ್‌ಲಿದ್ದರೆ ನಮ್ಮನೇಗೆ ಬಂದ್ ನಾಲ್ಕ್ ದಿನ ಇದ್ದ್ ಹೋಕಾಗಿತ್ತ್, ನೀವ್‌ಗೆ ಹಿಂಗೆ ಆಗಿಹೋತಲ್ಲಾ"ತ ಮೊಸಳೆ ಕಣ್ಣೀರೂ ಹಾಕಿದೊ. ತೊಂಬತ್ತನಾಲ್ಕ್ ವರ್ಸ

ದಾಟಿದ್ದ ಅತ್ತೆನ ಕೊಂಬರೆಲಿದ್ದ ಉದ್ದ ಕನ್ನಡಿನ ನೋಡಿಕಂಡ್ "ಕೋಂಬರೆಲಿ ಮೊಕ ಕಾಂಬಂಗೆ ಕನ್ನಡಿ ಇರಿಕಾಗದ್‌ಗಡ" ಎಂತಾ ಜನಗ ನೋಡಿ ಕೊಂಬರೆಲೇ ಕನ್ನಡಿ ಇಸಿಯೊಳ್ಗಿ"ತ ಮಾತಾಡಿಕೊಂಡೊ. ಅವ್‌ಕೇನ್ ಗೊತ್ತ್? ನಿಜ ಹೇಳೊಕೂತಾದರೆ ನನ್ನ ಅತ್ತೆ ಅವರ ಕೊಂಬರೆಲಿ ಒಬ್ಬನೇ ಕುದ್ದ್‌ಕಂಡಿರ್‌ಕನ ಆ ಕನ್ನಡಿನೇ ಅವ್‌ಕೆ ಜೊತೆಗಾರ್‌ತಿನಂಗೆ ಇತ್ತ್. ಎಷ್ಟೋ ಸರ್ತಿ ಅವ್‌ರ ಮೊಕನ ಅವೇ ಕನ್ನಡಿಲಿ ನೋಡಿಕಂಡ್ ಕಷ್ಟ ಸುಖ ಮಾತಾಡ್‌ತಿದ್ದೊ. ತಿಂಬಕನ ಕೈನ ಮುಂದೆ ನೀಂಡಿ "ರೊಟ್ಟಿ ಬೇಕಾರೆ ತಿನ್ನ್"ತ ಹೇಳ್‌ತಿದ್ದೊ. ಅವೇ ಒಮ್ಮೊಮ್ಮೆ ಮೊಕನ ದಪ್ಪ ಮಾಡಿಕಂಡ್ ನನ್ನ ಕರ್‌ದ್ ಕನ್ನಡಿನ ತೋರ್‌ಸಿ "ಅದ್‌ರ ಮುಸುಂಡಿ ನೋಡ್, ಭತ್ತ ಹಾಕಿರೆ ಹೊದ್‌ರಿ ಹೋದೆ"ತ ಹೇಳಿ ನಂಗೆ ನಗೆ ಬರ್‌ಸ್‌ತಿದ್ದೊ. ಇಂತಾ ಕನ್ನಡಿ ಬಗ್ಗೆ ಬಂದವು ಕೆಟ್ಟಾಗಿ ಮಾತಾಡ್‌ಕನ ನಂಗೆ ಇರ್‌ಸ್ ಮುರ್‌ಸ್ ಆಗ್‌ತಿತ್ತ್. ಬಾಯಿ ಬುಟ್ಟ್ ಇದ್‌ನ ಹೇಳಿಕೆ ನಂಗೆ ಮುಲಾಜಿ ಬೇರೆ. ಎಲ್ಲಾರ್ 'ಗಾಟಿಸೊಸೆ'ತ ಹೇಳಿಬುಟ್ಟರೇತ! ಇಂತಾ ಮುಲಾಜ್‌ಂದ ಬೇಕಾದಷ್ಟ್ ಕೊರ್‌ಗಿಗೆ, ಪರಿತಾಪಗಳ್‌ಗೆ ಒಳಗಾದರೂ ಅದರ ದೂರ ಇಸಿಕೆ ನನ್ನ ಜನ್ಮಲಿ ಸಾಧ್ಯವೇ ಆತ್‌ಲೆಲಾತ ಬೇಕಾದಷ್ಟ್ ಸರ್ತಿ ಗ್ಯಾನ ಮಾಡ್‌ನೆ.

ಹಿಂಗೇ ಒಂದ್ ದಿನ ಅತ್ತೆಗೆ ತುಂಬಾ ಹತ್‌ರದವು ಬಂದೊ. ಕಟ್ಲ್‌ಲಿದ್ದ ಅತ್ತೆನ ನೋಡಿ ಕಣ್ಣೀರ್ ಹಾಕಿದೊ. ಜೋರ್‌ಲಿ ಕಿರ್ಚಿಕಂಡ್ ಕರ್‌ಯಕನ ಕಣ್ಣ್ ಬುಟ್ಟ್ ನೋಡ್‌ದ ಅತ್ತೆನ ನೋಡಿ "ನಮ್ಮನ ಲಾಯ್‌ಕಲಿ ಗುರ್‌ತ್ ಹಿಡ್‌ದೊ"ತ ಕುಸಿ ಪಟ್ಟೊ. ನಾ ಅಡ್‌ಗೆ ಮನೇಂದ ಕಾಪಿ ಕಾಸಿ ತಾಕನ ಅವ್ ತಂದಿದ್ದ ಕಳ್ಳ್ ಕುಪ್ಪಿನ ಒಬ್ಬ ಹಿಡ್‌ಕಂಡ್, ಇನ್ನೊಬ್ಬ ಅತ್ತೆನ ಒರ್‌ಗಿಸಿಕಂಡ್ ಬಾಯ್‌ಗೆ ಸುರೀತಿದ್ದೊ! ಅದ್‌ನ ನೋಡಿ ಗಾಬರಿಲಿ ನನ್ನ ಕೈಲಿದ್ದ ಕಾಪಿ ತಟ್ಟೆ ಬುದ್ದ್ ಹೋಗದ್ದ್ ದೊಡ್ಡದ್.

ಇನ್ನೊಂದ್ ಕಡೆಯವು ಬಂದೊ. ಅದ್-ಇದ್ ತಿಂಡಿ-ಪಂಡಿ, ಕೇಕ್-ನೆಲ್ಲಾ ಪ್ರೀತಿಲಿ ತಂದಿದ್ದೊ. ತಿಂಬ ಕಾಲಲಿ ತಂದ್ ಕೊಡದೆ ಈಗ ಹೆಂಗೆ ತಂದ್ ಕೊಡ್ತಾ ಒಳೋತ ನನ್ನ ಮನ್‌ಸ್‌ಲೇ ಹೇಳಿಕಂಡೆ. ಅವ್‌ಕೆಲ್ಲಾ ಕಾಪಿ ಕಾಸಿಗೆ ಒಳಗೆ ಹೋಕೆ ಮೊದ್‌ಲ್ "ಅತ್ತೆಗೆ ಈಗ ಎಂತದೂ ಜಾಸ್ತಿ ತಿಂಬಕಾಲೆ. ಹಾಲು ಮತ್ತೆ ಗಂಜಿ ತರದ್ದ್ ಮಾತ್ರ ನುಂಗಿಕಂಡವೇತ ಸೂಕ್ಷ್ಮಲಿ ಹೇಳ್‌ದೆ. ಆಚೆ ಹೋಗಿ ಈಚೆ ಬಾಕನ ಕೇಕ್ ತುಂಡ್‌ನ ತೋರ್‌ಸಿ "ಒಂದ್ ಇಡೀ ಪೀಸ್ ತಿಂದೊ. ನಾವ್ ತಂದದೂತ ಕುಸೀ ಆತ್ ಕಂಡದೆ, ಎಷ್ಟ್ ಆಸೆ ಇತ್ತೋ ಏನೋ"ತ ಹೇಳ್‌ದೊ. ಅತ್ತೆನ ನೋಡ್‌ದೆ. ಒಮ್ಮೆ ಮೆಲ್ಲೆ ಕಣ್ಣ್ ಬುಟ್ಟ್ ಹಂಗೇ ಮುಚ್ಚಿಕಂಡೊ. ಬಂದವ್

ಹೋದೊ. ನಮ್ಮವ್ ಉಂಬಕೆ ಬಂದೊ. ಅನ್ನನ ಸ್ವಲ್ಪ ಗ್ರೈಪು ಹಾಕಿ ಮಿರ್ಂಡಿ ಇಬ್ಬರೂ ಸೇರಿ ಅತ್ತೆಗೆ ಯಾಗೊಳ್‌ನಂಗೆ ತಿನ್‌ಸಿಕೆ ಸುರು ಮಾಡ್‌ರೆ ಸ್ವಲ್ಪನೂ ಒಳ ಹೋಗ್‌ತಾನೇ ಇಲ್ಲೆ! ಹೊತಾರೆ ಲಾಯ್‌ಕಲಿ ತಿಂದವ್‌ಕೆ ಏನಾತಪ್ಪಾತ ಹೆದ್‌ರಿ ಇವ್ ಬಾಯ್‌ನ ಅಗಲ್‌ಸಿ ತೋರ್ ಬೆರಳ್‌ನ ದೊಂಡೆಲಿ ಇಳ್‌ಸಿಳೊ. ಎಂತನ ಹೇಳ್‌ದು! ಬಂದ ನೆಂಟಂಗ ತಂದ್ ತುರ್‌ಕ್‌ಸ್‌ದ ಕೇಕ್‌ನ ಇಡೀ ತುಂಡ್ ದೊಂಡೆಲಿ ದಿಮ್ಮಿನಂಗೆ ಕುದ್ದಿತ್ತ್! ಅದನೆಲ್ಲಾ ಹೊರಗೆ ತೆಗ್‌ದ್ ಮನಾರ ಮಾಡಿ ಅವ್‌ಕೆ ತಿನ್‌ಸಿದವ್ಕೇ ಗೊತ್ತ್ ಅದರ್ ಫಜೀತಿ!

ಮರ್‌ದಿನ ಮತ್ತೊಂದ್ ಭಾಗದವು ಬಂದೊ. ನಾವಿಬ್ಬರ್ ಮಕ್ಕಳ್ನ ಮನೇಲಿ ಬುಟ್ಟು ಹತ್ತ್‌ರದ ಒಂದ್ ಸಾವ್‌ಗೆ ಹೋಗಿದ್ದೊ. ಅಲ್ಲಿಂದ ಹೊರಡ್‌ಕನ ಮಗಳ್‌ದ್ ಫೋನ್ ಬಾತ್. ಅವ್ವ ಜೋರ್ ಜೋರ್‌ಲಿ ಉಸ್‌ರ್ ಬುಡ್ತಾ ಒಳೊ... ಬಂದ ಅಂಕ್‌ಲ್ ಹೇಳದೊ... ಇಂದ್ ಸೋಮಾರ. ಇಂದ್ ಆಯ್‌ಸ್ನ ಮುಗ್‌ದೆ ಇವ್‌ಕೇ"ತ ಹೇಳಿ ತೀರ್ಥ ನೀರ್ ಕೊಡಿ, ಕಾಯಿ ನೀರು ಕೊಡೀತ ಹೇಳಿ ಮಕ್ಕಳ ಕೈಲಿ ಕೊಡ್‌ಸಿ ಹೋಗಿದ್ದೊ. ಮಕ್ಕ ಹೆದರಿಕಂಡ್ ಕುದ್ದಿದ್ದೊ. ಹಂಗೇ ನಾವ್ ಕೂಡಾ ಎದ್ದೋ ಬಿದ್ದೋತ ಓಡಿ ಬಂದಿದ್ದೊ. ಅದಾಗಿ ಸುಮಾರ್ ದಿನಕೆ ಮುಟ ಅತ್ತೆ ಬದ್‌ಕಿದ್ದೊ.. ಕಡೇಲೊಮ್ಮೆ ಅತ್ತೆ ದೇವರ ಪಾದ ಸೇರ್‌ದೊ. ತಿಥೀಲಿ ಸನ ಅತ್ತೆಗೆ ಕುಸೀತ ತಿಂಡಿಗಳ್‌ನ, ಹಣ್ಣ್–ಹಂಪನ್‌ಲ ತಂದ್ ರಾಸಿ ಹಾಕಿದೊ ಬೇಕಾದವು. ಅವ್‌ಕೆ ಈ ತಿಂಡಿ ಕುಸಿ, ಈ ಹಣ್ಣ್ ಕುಸೀತ ಮಾತಾಡಿ ಕೊಂಡೊ... 'ಸತ್ತ ಎಮ್ಮೆಗೆ ಹಾಲ್ ಜಾಸ್ತೀ'ತ ಗ್ಯಾನಾತ್.

ಜೀವಂತ ಇರ್‌ಕನ ಯಾಕೆ ಈ ಮನ್‌ಸಂಗೆ ಬೆಲೆ ಇರ್‌ದುಲೆ? ಯಾಕೆ ಪ್ರೀತಿ ಸಿಕ್ಕುದ್‌ಲೇತ ನನ್ನ ಮನಸ್‌ಸ ಒಳಗೊಳಗೇ ಕೇಳ್‌ತಿತ್ತ್. ಲಾಯ್‌ಕಲಿ ಇರ್‌ಕನ ಒಟ್ಟಿಗೆ ಕುದ್ದ್‌ಕಂಡ್, ಕುಸೀಲಿ ತಿಂದ್‌ಕಂಡ್ ಕಾಲ ಕಳಿಯಕೆ ನಾವ್‌ಗೆ ಯಾಕೆ ಸಾಧ್ಯವಾದುಲೆ? ಸತ್ತ ಮೇಲೆ ತೋರ್‌ಸುವ ಅಕ್ಕರೆ ಅರ್ಧದಷ್ಟಾದರೂ ಇರ್‌ಕನ ಪರಸ್ಪರ ಕೊಟ್ಟ್‌ಕಂಡರೆ ಈ ಬದ್‌ಕ್ ಎಷ್ಟ್ ಅರ್ಥಪೂರ್ಣ ಆದೆಲಾ? ಜವಾಬು ಸಿಕ್ಕದ ಪ್ರಶ್ನೆ ನನ್ನದ್!

**ಸ್ಪರ್ಧೆಲಿ ಮೊದಲ ಬಹುಮಾನ ಪಡ್ದ ಅರೆಬಾಸೆ ಲಲಿತ ಪ್ರಬಂಧ**

---

**ಲೀಲಾ ದಯಾನಂದ**
ಕೊಟ್ಟಕೇರಿಯನ, ಎಸ್.ಡಿ.ಇ., ಬಿಎಸ್‌ಎನ್‌ಎಲ್, ಮಡಿಕೇರಿ
9447858586

# ಚಾಂಪ ಚಾಮೇವ್ವ ಮತ್ತೆ ಪಿಳ್ಳಿಕ

● ಎಡಿಕೇರಿ ವಿಶ್ವನಾಥ

"ಚಾಂಪ – ಚಾಮೇವ್ವ"ತ ಹೇಳುವ ಮನೆ ಹಿರಿಯರ, ಚಾಮೇಪ್ಪ –ಚಾಮೇವ್ವ, ಉಗ್ಗಪ್ಪ – ಉಗ್ಗವ್ವ; ಈಗೀಗ ತಾತ, ಅಜ್ಜ, ಅಜ್ಜಿ, ಅವ್ವ...... ಹಿಂಗೆ ಪಿಳ್ಳಿಕ ಕರ್ದವೆ. ಹುಟ್ಟಿದ ಕೂಸಿಗೆ ವರ್ಷ ಆತೋ ಇಲ್ಲೆಯೋ, ಎದೆ ಹಾಲ್ಬುಡ್ಸಿ ಪಿಳ್ಳಿಕಳ ಸೀದಾ ಚಾಮೇವ್ವ – ಚಾಮೇಪ್ಪನ ಹೆಗಲಿಗೆ ಹೊರಿಸಿವೆ. ಹಳೆಕಾಲದ ಕೂಡುಕುಟುಂಬ ಆಗಲಿ, ಈಗನ ಸಣ್ಣ ಸಂಸಾರ ಆಗಲಿ, ಸಣ್ಣಮಕ್ಕಳಿಗೆ ಮನೇಲಿರುವ ಚಾಪ್ಪು– ಚಾಮೇವ್ವಂದ್ರ ಆರೈಕೆ ಬೇಕೇ ಬೇಕು. "ಅಜ್ಜಿ ಇಲ್ಲದ ಮನೆ ಮನೆ ಅಲ್ಲ, ಮಜ್ಜಿಗೆ ಇಲ್ಲದ ಊಟ ಊಟ ಅಲ್ಲತ" ಕನ್ನಡಲಿ ಒಂದು ಗಾದೆ ಉಟ್ಟು. ಪಿಳ್ಳಿಕಳಿಗೆ ಉಸಾರ್ ಇಲ್ಲದಿರ್ಕನ ಅವುಕೆ ಮದ್ದ್ – ಗಿದ್ದಾಡಿಕೆ, ಅತ್ತ್–ಮರ್‌ಟ್‌ರಂಪ ಮಾಡ್ಕನ ಸಮಾಧಾನ ಮಾಡಿಕೆ, ತಿಂದ್ ಹೆಚ್‌ಕಮ್ಮಿ ಆಕನ ಕಾಲ್‌ಂದ ತಲೆವರೆಗೆ ಮೈಗೆಲ್ಲಾ ಬಿಸಿಬೂದಿ ತಿಕ್ಕಿ ಕಟ್ರ್ ಮುರಿಯಕೆ, ಪುಂಡು ಮಾಡಿ ಸಿಕ್ಕಿ ಹಾಕಂಬಕನ ತಪಲ್ಸಿಸಿಕಣಿಕೆ ಚಾಮಿ ಅವ್ವನ ಸೀರೆಸೆರ್‌ಗ್ ಬೇಕೇ ಬೇಕು. ದೊಡ್ಡ ಚೇಷ್ಟೆ ಮಾಡ್ದ ಗಂಡ್ಮಕ್ಕಳಿಗೆ ಪೆಟ್ಕೊಡೆಕೆ ಅಪ್ಪ ಕೋಲು ತಕಂಬಾಕನ ಅಂಗಳ ಮೂಲೆಲಿ ಕಾಯಿ ಚೊಲ್ಲುವ ಚಾಮಿ ಅಪ್ಪನ ಹಕ್ಕಲೆ ಓಡಿಹೋಗಿ ನಿಂತರೆ, ಎಂಥ ಅಪ್ಪನೂ ಆ ಕೂಸುಗೆ ಪೆಟ್ಕೊಡಿಕೆ ಆಗದೆ; ಅಂವನ ಹೆದರಿಸುವಂಗೆ ಒಮ್ಮೆ ಕಣ್ಣಗಲಿಸಿ, "ಇನ್ನೊಮ್ಮೆ ಕೈಗೆ ಸಿಕ್ಕ್, ನಿನ್ನ ಬೆನ್ನಿಗೆ ಬಾಸುಂಡೆ ಬರುವಂಗೆ ಬಿಗ್ದನೆ" ತ ಮೊಕ ಮಾಡಿ ಕಂಡ್ಕೋಲು ಬಿಸಾಕಿ ಅತ್ತ ಹೋಕನ, ಚಾಂಪ ಮುಸಿ–ಮುಸಿತ ನೆಗಾಡಿಕಂಡದೆ. ಅದೇ ಅಪ್ಪನ ಬಾಲ್ಯಲಿ ಹಿಂಗೆ ನಡಿತ್ತಿದ್ದ ಘಟನೆಗ ಚಾಪ್ಪುಂಗೆ ಗ್ಯಾನ ಬಾಕೆ ಸಾಕ್!

ಅಜ್ಜ–ಅಜ್ಜಿ, ತಾತ–ಅವ್ವ ಈ ಶಬ್ಧಗ ಕನ್ನಡಭಾಷೆಲಿ ರೂಢಿಂದ ಬಳಕೆಲಿ ಉಟ್ಟು. ಆದರೆ ಉಗ್ಗಪ್ಪ–ಉಗ್ಗವ್ವ, ಚಾಪ್ಪು,ಚಾಮಿಯಪ್ಪ– ಚಾಮಿಅವ್ವ ಇವು ವಿಶೇಷ ಮೂಲಗಳಂದ ಹುಟ್ಟಿದ್. 'ಸ್ವಾಮೀ ಅಪ್ಪ = ಚಾಮಿ ಅಪ್ಪ = ಚಾಪ್ಪು. ಸ್ವಾಮಿತ ಹೇಳಿರೆ ದೇವ್ರು. ಅಂದರೆ ದೇವ್ರಿಗೆ ಸಮಾನವಾದ ಅಪ್ಪತ ಅರ್ಥ. ಅದೇ ತರ, ಹುಗ್ಗಿಅಪ್ಪ, ಹುಗ್ಗಿಅವ್ವ

ಉಗ್ಗಪ್ಪ–ಉಗ್ಗವ್ವ ಅಗುಟ್ಟು. * "ಹುಗ್ಗಿತ" ಹೇಳಿರೆ, ತುಪ್ಪ, ತರಕಾರಿ, ಅಕ್ಕಿ ಎಲ್ಲ ಹಾಕಿ ಮಾಡಿದ ಪೌಷ್ಟಿಕವಾದ ಕಿಚ್ಚಡಿ ಅನ್ನ. [*ಆಧಾರ :– (1) ಕನ್ನಡ–ಕನ್ನಡ ಶಬ್ದಕೋಶ, ಬಿ.ಜಿ.ಯಸ್. ಪಬ್ಲಿಕೇಷನ್,ಮತ್ತು,(2)ವಿಜಯವಾಣಿ ದಿನಪತ್ರಿಕೆ, ದಿನಾಂಕ16–12–2020) ಇದರ್ನ ವಿಶೇಷವಾಗಿ ಮಕ್ಕಳಿಗೆ ಕೊಡುವಂಥ ಆಹಾರ. ಹಾರುವ ಹಕ್ಕಿಗಳ, ಆಕಾಶಲಿ ಚಂದ್ರನ ತೋರಿಸಿ ಕಂಡಂಥ ರುಚಿಯಾದ ಊಟನ ಪಿಳ್ಳೆಕಳಿಗೆ ತಿನ್ನಿಸುವ ತಾಳ್ಮೆ; ಹೆತ್ತ ಅಯ್ಯೆನ ಬುಟ್ಟರೆ, ಉಗ್ಗವ್ವ ಮತ್ತೆ ಉಗ್ಗಪ್ಪನ್ಗೆ ಮಾತ್ರ ಇರುದು.

ಸೂರ್ಯಕಂತಿ ರಾತ್ರಿ ಆದಂಗೆ ಪಿಳ್ಳೆಕಳ ಕೈಕಾಲ್ತೊಳ್ಸಿ, ದೇವ್ರದೀಪದ ಮುಂದೆ ಕೈಮುಗ್ಸಿ, ಪದ್ಧತಿ ಇದ್ದರೆ ಭಜನೆ ಹಾಡ್ಸೇಳ್ಸಿ, ಹಣೆಗೆ ದೇವ್ರಬೊಟ್ಟು ಹಾಕ್ಸಿ; ಮಿಣ–ಮಿಣ ಬೆಳ್ಗುವ ಸೀಮೆಣ್ಣೆ ದೀಪದ ಮುಂದೆ ಎಲ್ಲರ್ನ ಸಾಲಾಗಿ ಕೂರಿಸಿ ಪಾಠಪುಸ್ತಕ ಓದಿಕಂಬದರ ನೋಡಿಕಂಬದು ಚಾಮಿ ಅಪ್ಪನ ಕೆಲಸ. ಒಂದು ಪಿಳ್ಳೆಮಗ್ಗಿ ಹೇಳ್ಕನ, ಮತೊಬ್ಬ ಮನೆಹಂಚಿ ಹಾರಿಹೋಗುವಂಗೆ ಕಿರಚಿಕಂಬದು, ಅಂವ ಜಿಂಟಿತ್ತ ಇವುಳು," ಹೊ........ತ" ಮರ್ಡುದು, ಎಲ್ಲರ ಸಮಾಧಾನ ಮಾಡಿಆಕನ ಉಗ್ಗಪ್ಪನ ತಲೆ ಕೆಟ್ಟೋಗಿದ್ದದೆ. ಅಷ್ಟು ಹೊತ್ತಿಗೆ ಅಡುಗೆಮನೆಂದ, "ಊಟಕೆ ಎಲ್ಲವು ಬನ್ನಿತ" ಅಯ್ಯೆಂದರೆ ಕೂಗಿಗೆ; ಪುಸ್ತಕಗಳ ಚೀಲಕೆ ಸೇರಿಸಿ, ಬಟ್ಲುಂದ ಕುದ್ದವೆ. ಊಟ ಮಾಡ್ತಿದ್ದಂಗೆ ಕೆಲವು ಪಿಳ್ಳೆಕ ಕುದ್ದಲ್ಲೇ ಬೆಲ್ಲ ತೂಗಿಕಂಡ್, ಹೊಟ್ಟೆತುಂಬಿದಂಗೆ ನಿದ್ದೆಲೇ ಊಟಮಾಡಿಕಂಡ್ತಲೆ ಜೂಂಗಿಕಂಡ್ ಅವರ ಎತ್ತಿಕಂಡ್ ಕೊಂಬರೆ ಕಟ್ಲ್ಮೇಲೆ ಮಲಗುಸುದು ಚಾಮಿ ಅವ್ವನ ಕೆಲಸ. ಹಂಗೆ ಮಲಗಿದ ಪಿಳ್ಳೆ, ಮಾರ್ನದಿನ ಬೆಳಿಗ್ಗ್ ಎದ್ದ್, "ನಾ... ನಿನ್ನೆ ರಾತ್ರಿ ಊಟ ಮಾಡ್ಲ್ರೀತ "ರಂಪ ಮಾಡಿರೆ, ಅಂವ ಊಟ ಮಾಡಿದಕ್ಕೆ ಸಾಕ್ಷಿಸಮೇತ ಹೇಳಿ ಸಮಾಧಾನಪಡಿಸುವ ಕೆಲಸ ಇದ್ದದೆ! ನಿದ್ದೆ ಬರುವವರೆಗೆ "ಅಜ್ಜಿಕಥೆ" ಹೇಳುದು ಉಟ್ಟೇ–ಉಟ್ಟು." ಏಳ್ಮಲ್ಲಿಗೆ ತೂಕದ ರಾಜಕುಮಾರಿನ, ಕೀಲ್ಕುದುರೆ ಮೇಲೆ ಹಾರಿ ಕಂಬಕನ ರಾಜಕುಮಾರ ಯಾರಿಗೂ ಗೊತ್ತಾಗದ ಹಂಗೆ ಅವಳ್ನ ಅವನ ರಾಜ್ಯಕೆ ಕರ್ಕಂಡ್ಹೋಕನ ಅಡ್ಡಬಂದ್ಯುದ್ಧ ಮಾಡುವ ರಾಕ್ಷಸರನ್ನ ಸೋಲ್ಸಿ–ಓಡಿಸಿ, ಮದುವೆ ಆಗಿ, ಮುಂದೆ ಅವು ಸುಖವಾಗಿ ರಾಜ್ಯಭಾರ ಮಾಡುದು......., " ಅಷ್ಟುಹೊತ್ತಿಗೆ ಎಲ್ಲ ಪಿಳ್ಳೆಕ "ಹುಂ" ಗುಟ್ಟುದು ನಿಲ್ಸಿ ನಿದ್ದೆ ಮಾಡಿದ್ದವೆ....! ಮುಂದೇನ ದಿನ ಸುರುಂದೇ ಕಥೆ .....ಯಥಾಪ್ರಕಾರ ನಿದ್ದೆ......! ಇಲ್ಲದಿದ್ದರೆ, "ಚೋರೆಹಕ್ಕಿ

ದಾರಿ ಕರೆ ಮರದ ಮೇಲೆ ಮೂರು ಮೊಟ್ಟೆ ಹಾಕಿದರ 'ಕಳ್ಳಕಾಗೆ' ಕದ್ದ್ ತಿನ್ನುವ ಕತೆ. ಆಗ ಉಪಾಯಲಿ ಕಾಗೆನ ಊಟಕೆ ಕರ್ದ್‌ಚೋರೆ ಹಕ್ಕಿ, ಕಾಗೆನ ಬೆನ್ಗೆ ಕಾದ ಪೆಟ್ಟ್‌ಗ ಬರೆಹಾಕ್ಕನ, ಉರಿ ತಡಿಯಕೆ ಆಗದ ಕಾಗೆ, ತಿಂದ ಮೊಟ್ಟೆಗಳ ಬಾಯಿಂದ ಕಕ್ಕಿ, ಆ ಮೊಟ್ಟೆಗೆಲ್ಲ ಹಕ್ಕಿಪಿಳ್ಳೆಗ ಆಗಿ ಚೋರೆಹಕ್ಕಿಗೆ ಪುನಃ ಅದರ ಮರಿಗ ಸಿಕ್ಕುದು ......" ಇಂಥ ಪೊರ್ಲುನ ಅಜ್ಜಿ- ಕತೆಗಳ ವರ್ಷಪೂರ್ತಿ ಕೇಳಿ ಆಕನ ಪಿಳ್ಳೆಕ ಎಲ್ಲಾ ದೊಡ್ಡವು ಅಗಿದ್ದವೆ.

ಪಿಳ್ಳೆಕ ದೊಡ್ಡವು ಆಗ್‌ತಿದ್ದಂಗೆ ಚಾಂಪ-ಚಾಮಿ ಅವ್ವಂಗೆ ಸಹಾಯ ಆದು ಉಟ್ಟು. ಕೈಯಲೆಲಿ ಕುದ್ದು ಕಂಡ್, ಕುಟ್ಟಣಿಲಿ ಎಲೆಅಡಿಕೆ ಗುದ್ದಿಕಂಡ್; ನೆರೆಮನೆ ಸೋಂಪ ಅಜ್ಜನೊಟ್ಟಿಗೆ ಪಟ್ಟಾಂಗ ಹೊಡ್ಕಂಡ್ ಬಾಕನ ಅಲ್ಲೇ ಆಟ ಆಡಿಕಂಡಿರುವ ಪಿಳ್ಳೆಗೆ, "ಬಾಪಾ .... ರಾಜ, ಈ ಬೀಡಿನ ಒಲೆಲಿ ಹೊತ್ತುಸಿಕಂಡ್ಬಾ.."ತ ಚಾಮಿ ಅಪ್ಪ ಆಟಆಡ್ತಿದ್ದ ಪಿಳ್ಳೆ ಕೈಗೆ ಒಂದು ಗಣೇಶ್ಬೀಡಿ ಕೊಟ್ಟದೆ. ಆ ಪಿಳ್ಳೆ ಅಡಿಗೆಮನೆ ಒಲೆಲಿರುವ ಕೆಂಡಲಿ ಬೀಡಿ ಹೊತ್ಸಿ ಓಡಿಕಂಡ್ ಬಂದಂಗೆ ಕೊಟ್ಟದರ, ಚಾಂಪ ಬಾಯಿಗೆ ಮಡ್ಗಿ, ಒಂದು ದಮ್ಮು ಎಳಿಯಕನ, ಬೀಡಿ ತುದಿ ಕೆಂಪು ಕೆಂಡದಂಗೆ ಹೊತ್ತಿಕಂಬದರ ನೋಡಿ ಕುಸಿ ಆದೆ. ಆದರೆ ಅದು ಅಲ್ಲಿಗೆ ನಿಲ್ಲುದುಲೆ. ಮಳೆಗಾಲ ಸೀತಕೆ ಬೀಡಿ ಕೆಲವು ಸಲ ಸರಿಯಾಗಿ ಹೊತ್ತುದುಲೆ. ಬೀಡಿನ ಚಾಂಪನ ಕೈಗೆ ಕೊಟ್ಟ್, ಅವು ದಮ್ಮು ಎಳಿಯಕೆ ಮುಂದೆ ಬೆಂಕಿ ಕೆಟ್ಹೋದೆ. ಇದಿಕೆ ಉಪಾಯ ಎಂತದ್? ಕೆಂಡಕೆ ಬೀಡಿ ಮುಟ್ಟಿಕನ ಹೊತ್ತಿ ಕಂಡಂಗೆ ಆಗಿಅಡಿಗೆಮನೆ ದಾಟಿಬಾಡೆ, ಕೈಯಾಲೆ ಕಟ್ಟಳೆ ದಾಟಿಕೆ ಮುಂದೆ ಒಮ್ಮೆ ಆ ಕಡೆ- ಈಕಡೆ ನೋಡಿ ತಾನೇ ಒಂದು ದಮ್ಮು ಎಳ್ದ್ಬಿಲ್ಲಂಗೆ ಚಾಂಪನ ಕೈಗೆ ದಾಟಿಸುದು. ಸುರುಸುರುಲಿ ದಮ್ಮು ಎಳಿಯಕನ ಬೀಡಿದ್ಹೊಗೆ ಎಲ್ಲ ಹೊಟ್ಟೆಗೆ ಹೋಗಿ, ಅಲ್ಲಿಂದ ನೆತ್ತಿಗೆ ಏರಿ, ಕೆಮ್ಮು ಬಂದ್ತಲೆ ಸುತ್ತುದು ಆದೆ........

ತಿಂಗಳಿಗೆ ಒಮ್ಮೆ ಐದಾರ್ಮೈಲ್ದೂರಲಿ ಇರುವ ವಾರದ ಸಂತೆಗೆ ಚಾಂಪನೊಟ್ಟಿಗೆ ಹೋದು ಹೇಳಿರೆ ಖುಷಿಯೋ-ಖುಷಿ. ಆ ವಯಸ್ಲಿ ಅಷ್ಟು ದೂರ ನಡಿಯಕೆ ಬೊತ್ತದಿದ್ದರೂ, ಬೆಳಿಗ್ಗೆ ಎದ್ದಂಗೆ ಸಣ್ಣದಾಗಿ ಅಯ್ಯೆನೊಟ್ಟಿಗೆ "ನಾ ಸಂತೆಗೆ ಹೋನೇತ ......" ರಗಳೆ ಶುರುಮಾಡಿ, ಅವು ಒಪ್ಪದಿದ್ದರೆ ಅತ್ತ್-ಮಡ್ಡ ತಪ್ಪಿಗೆ ಸಿಕ್ಕನ ರಾಜ್ಯ ಗೆದ್ದಂಗೆ ಆಗ್ತಿತ್ತ್.

ಚಾಂಪ, ಕೋಟು ಸುರಾಲ್ ಹಾಕಿ, ಹೋಲ್ಸಿದಲೆದರ್ಚಪ್ಪಲ್ಕಾಲಿಗೆ ಸೆಕ್ಕಿಸಿಚರಾ... ಪರಾತ ಸದ್ದ್ ಮಾಡಿಕಂಡ್, ಹಿಡಿ ಬಗ್ಗಿದ ಬೆತ್ತದ ದೊಣ್ಣೆ ಬಲಗೈಲಿ ಹಿಡ್‌ದಿದ್ದರೆ, ನಾನ್ಪಿಳ್ಳಿ; ಗಂಜಿ ಹಾಕಿ ಒಗ್ದ ಒಣಗಿದ ರೊಟ್ಟಿನಂತ ಚಡ್ಡಿ–ಶರ್ಟ್ಹಾಕಿ, ಬರಿಕಾಲ್ಲಿ ಅವರ ಹಿಂದೆಂದ ಕುಳ್ಳೊಟು ಹೆಜ್ಜೆಹಾಕ್ತಿದ್ದೆ. ಆದರೆ ಎಷ್ಟೊತ್ತು ಹಂಗೆ ಓಡಿಕೆ ಸಾಧ್ಯ? ಸ್ವಲ್ಪಹೊತ್ತಿಗೆ ಚಾಂಪನ್ಗೆ ಸಂತೆಗೆ ಹೋಗುವ ಪರಿಚಯದವು ಸಿಕ್ಕಿದ ಮೇಲೆ ಅವರ ಹೆಜ್ಜೆ ಇನ್ನೂ ಜೋರಾಗ್ತಿತ್ತ್. ನಂಗೆ ಓಡಿ–ಓಡಿ ಕಾಲ್ಬಚ್ಚಿ "ಚಾಂಪಾ...ಸಂತೆ ಇಷ್ಟ್ ದೂರ ಉಟ್ಟುತ" ಕೇಳಿಕೆ ಸುರುಮಾಡ್ತಿದ್ದೆ. ಓಡಿ ಓಡಿ ನಡಿಯತ್ತಿದ್ದ ನನ್ನ ಮುಖ ಮೊರೆ, ಉಸುರು ಬುಡುದು ನೋಡಿ, ಐದ್–ಆರ್ ವರ್ಷ ವಯಸ್ನವನ್ನ ಎತ್ತಿ ಅವರ ಹೆಗಲ್ಮೇಲೆ ಕೂರಿಸಿಕಂಡ್, ಹೊತ್‌ಕಂಡ್ ಸಂತೆಗೆ ಹೋದು, ಅಲ್ಲಿ ಬಣ್ಣ–ಬಣ್ಣದ ಮಿಠಾಯಿ, ಬುಗ್ಗೆ, ಪೀಪಿ, ಕಣ್ಣಿಗೆ ಬಣ್ಣದ ಕನ್ನಡಕ ತೆಗ್‌ದ್ ಕೊಡ್‌ತಿದ್ದೊ. ಸಂತೆಂದ ವಾಪಸ್ಮನೆಗೆ ಬಾಕನ, ಚಾಂಪ ಸಂತೆ ಬ್ಯಾಗ್ಹಿಡ್ಕಂಡ್, ನನ್ನ ಯಥಾಪ್ರಕಾರ ಹೆಗಲ್ಮೇಲೆ ಹೊತ್ಕಂಡ್ಬಾಕನ ನಾನ್ಯುವರಾಜನಂಗೆ, ಕಣ್ಣಿಗೆ ಬಣ್ಣದ ಕನ್ನಡ್ಕ ಹಾಕಂಡ್ ಮಿಠಾಯಿ ತಿಂದ್ಕಂಡ್ಬರುತ್ತಿದ್ದ ಚಿತ್ರಣ, ಚಾಂಪನ ಪ್ರೀತಿ ಇಂದೂ ಜ್ಞಾಪಕ ಆದೆ.

ನಾವು ಪ್ರಾಥಮಿಕ ಶಾಲೆಗೆ ಹೋಕನ "ಅಜ್ಜನ ಕೋಲಿದು ನನ್ನಯ ಕುದುರೆ, ಹೆಜ್ಜೆಹೆಜ್ಜೆಗೂ ಕುಣಿಯುವ ಕುದುರೆ, ಕಾಲಿಲ್ಲದೆಯೂ ನಡೆಯುವ ಕುದುರೆ, ಕೂಳಿಲ್ಲದೆಯೂ ಬದುಕುವ ಕುದುರೆ"ತ ಒಂದು ಸುಂದರ ಶಿಶುಕಾವ್ಯ ಇತ್ತ್. ನಾನ್, ನನ್ನ ಚಾಂಪನ ಹಿಡಿಬಾಗಿದ ಬೆತ್ತದ ದೊಣ್ಣೆನ ಹಿಡ್ಕಂಡ್ ಅಂಗಳದ ಆಕಡೆಂದ ಈಕಡೆವರೆಗೆ ಪದ್ಯ ಹೇಳಿಕಂಡ್ ಕುದುರೆ ಮೇಲೆ ಕುದ್ದಂಗೆ ಆಟ ಆಡ್ತಿದ್ದೆ. ಆಗನ ಕಾಲಲಿ ಕೈಲಿ ದೊಣ್ಣೆ ಇಲ್ಲದೆ ವಯಸ್ಸಾದವು ಹೊರಗೆ ಹೊರಡುತಿತ್ಲೆ. ಬಹುಶ ಹಿಂದೆ ಕಾಡ್ದಾರಿಲಿನಡ್ಕಂಡ್ಹೋಕನ ಎದುರಾಗುವ ಹಾವು–ಚೇಳು, ಪ್ರಾಣಿಗಳಂದ ರಕ್ಷಣೆಗೆ ಅವಶ್ಯ ಆಗಿತ್ತ್. ಈಗ ಮನೆಂದ ಅಂಗಳಕೆ ಕಾಲ್ಮಡ್ಗಿರೆ ಅಲ್ಲಿ ಪಿಳ್ಳೆದ್ ಬೈಕ್, ಇಲ್ಲದಿದ್ದರೆ ಮನೆದ್ ಕಾರ್–ಜೀಪ್ ನಿಂತಿದ್ದದೆ; ಅದರ ಹತ್ತಿಕುದ್ದೊರಟರೆ ಆತ್. ಹಳ್ಳಿನ ಮೂಲೆಮೂಲೆಗೆ ಈಗ ರಸ್ತೆ–ಸೇತುವೆ ಆಗುಟ್ಟು. ಹಂಗಾಗಿ ಬೆತ್ತದ ದೊಣ್ಣೆ ಊರಿಕಂಡ್ನಡಿಯುವ ಅಜ್ಜಂದರ್, ಅವರ ಹೆಗಲ್ಮೇಲೆ ಸವಾರಿ ಮಾಡುವ ಪಿಳ್ಳೆಕಳ ನೋಡಿಕೆ ಸಿಕ್ಕಿಕಿಲೆ.

ನನ್ನ ಚಾಂಪ – ಚಾಮಿ ಅವ್ವನವಿಕೆ, ಓದು–ಬರ ಗೊತ್ತಿಲ್ಲದಿದ್ದರೂ, ಜೀವನ ಅನುಭವ, ಸೃಜನಶೀಲತೆ, ಮಾನವ ಪ್ರೀತಿ ಬಹಳ ಇತ್ತ್. ಆಗ ಹಳ್ಳಿಯವು ಬಹಳ ಕಮ್ಮಿ ಪರಾವಲಂಬಿಗ ಆಗಿದ್ದೊ. ಸಂತೆಂದ ಅವು ತರ್ತಿದ್ದ ಸೊಪ್ಪು, ಬೆಲ್ಲ, ಸೀಮೆಣ್ಣೆ, ಬೀಡಿ–ಬೆಂಕಿಪಟ್ನ; ವರ್ಷಕ್ಕೊಮ್ಮೆ ಮನೆವುಕೆಲ್ಲಾ ಬಟ್ಟೆ. ರೈತಾಪಿ ಜನ ಆದರಂದ ನೀರುಳ್ಳಿ–ಬೆಳ್ಳುಳ್ಳಿ ಬೆಳೆಬೆಳಿತ್ತಿದ್ದೊ. ಗದ್ದೆಪುಣೀಲಿ ಅಂಗೈ ಅಗಲದ ಜಾಗ ಇದ್ದರೆ ಅಲ್ಲಿ ನಾಲ್ಕ ಮೆಂತೆ ಬೀಜ ಹಾಕಿ ಬೆಳ್ತಿದ್ದೊ. ನನ್ನ ಚಾಂಪನಂಗೆ ಇನ್ನೂ ಕೆಲವು ಜನ ಅವುಕೆ ಬೇಕಾದ ಪಚ್ಚೆ, ಕುಕ್ಕೆ, ಗೊರ್ಗನೇಯದು, ಹೂಡುವ ನೇಗ್ಲ್ –ನೊಗ ಕೆತ್ತುದು, ಕೊಟ್ಟು–ಕತ್ತಿ, ಪಿಕ್ಕಾಸಿಗಳ ಬೆಂಕಿಲಿ ಕೆಂಪು ಕಾಯಿಸಿ ನೀರಿಗೆ ಮುಳುಗಸಿ ಹದಮಾಡುದು, ಚೀಪೆಕಡ್ಡಿಲಿ ಮೀನ್ಕೊಳಿ, ಬಿದ್ಕೊಡ, ಗೋರಿಮಾಡಿ ಮೀನ್ ಹಿಡಿಯದು, ಅಡಚಲ್–ಸಿಡಿ ಹಾಕಿ ಕಾಡ್ಕೋಳಿ–ಮೊಲ ಹಿಡಿಯೊದು ಅದನ್ನೆಲ್ಲಾ ಪೊರ್ಲುಲಿ ಅಚ್ಚಕಟ್ಮಾಡಿ ಮನೆವುಕೆ ಅಡಿಗೆ ಬೇಯ್ಸಿ ಹಾಕುದು ಚಾಮಿವ್ವನ ಕೆಲಸ ಆಗಿತ್ತ್. ಕೃಷಿಗೆ ಸಂಬಂಧಿಸಿದಂಗೆ ಬೀಜ ಬಿತ್ತುದು ನಾಟಿ, ಅಗೆ, ಕೊಯ್ಯೊದು, ಒಕ್ಕುಲು ಹಾಕುದು, ಹುಲ್ಲುಮುಂಡ ಮೆಟ್ಟುದು ಹಿಂಗೆ ನೂರ್ ಎಂಟ್ ಕೆಲ್ಸನ ಅವು ಮಾಡ್ತಿದ್ದೊ. ಅವರ ಅರ್ಧಕೆಲಸ ಅವರ ಮಕ್ಕ ಅಂದರೆ ನಮ್ಮ ಅಪ್ಪಂದರ್ ಮಾಡ್ತಿತ್ತೆ. ಪಿಳ್ಳಿಕ ನಾವು ಭೂಮಿನ ಬುಟ್ಟ್; ಕೃಷಿಕೆಲಸ ಮತ್ತೂರ್ದಾರದ ಪ್ಯಾಟೆಗಳಲ್ಲಿ ಜೀವನ ಸಾಗ್ಸಿಕೆ ಏನೋ ಒಂದು ಉದ್ಯೋಗ ಮಾಡಿಕಂಡ್ ಇರುದರ ನೆನ್ಸ್‌ಕನ "ಕಾಲ ಬಂದಂಗೆ ಕೋಲ ಕಟ್ಟುದು"ತ ಹೇಳುವ ನಮ್ಮ ಅರೆಬಾಸೆ ಗಾದೆ ನೆಂಪಾದೆ.

**ಸ್ಪರ್ಧೆಲಿ ಎರಡನೇ ಬಹುಮಾನ ಪಡ್ದ ಅರೆಬಾಸೆ ಲಲಿತ ಪ್ರಬಂಧ**

**ವಿಶ್ವನಾಥ ಎಡಿಕೇರಿ**
ಸಂಖ್ಯೆ : 4/63, 7ನೇ ಕ್ರಾಸ್, ಬೃಂದಾವನ ನಗರ
ಮತ್ತಿಕೆರೆ ಪೋಸ್ಟ್, ಬೆಂಗಳೂರು
6360349938




# ಪಟೇಲನ ಕಾಗದನೂ – ತಾಮುಣಿನ ಹುಂಜ ಕೋಳಿಯು

● ಸೂದನ ಎಸ್. ಈರಪ್ಪ

ಏಯ್... ತಾಮುಣಿ... ಬೋಳಿಯೇ ಬುಟ್ಟತ್ಲೆ... ಇಸ್ಟ್ ಹೋತಾರೆ...? ಹೆಗ್ಲ್‌ಲಿ ಬಾಳೆಗೊನೆ ಕಂಕ್‌ಲಡಿಲಿ ಕೋಳಿಹುಂಜ... ಯತ್ತ ಹೊರ್ಟನೇ...

ಸುಮಾರ್ ಒಂದುವರೆ ಹಾನಿಯಾದು ಹುಂಜ ಪಟೇಲನ ಬಾಯ್ಲಿ ಜೊಲ್ಲು ಸುರಿಯಕೆ ಬಾಕಿ.

ಓ ಪಟೇಲರೆ ನಮಸ್ಕಾರ... ಮಡಿಕೇರಿಗೆ ಹೊರ್ಟೆ. ಕೆಲ್ಸ ಆತೇಲೆ. ಪಾಪ ನಾಕ್ ಗಂಟೆಗೆ ಎದ್ದ್ ಕರಿಕಾಪಿ ಕುಡ್ದ್ ಆ ದೊಡ್ಡ ಕುಂದು ತಲೆಂದ ಇಳ್ಕಂಡ್ ಬಂದುಟಲೆ ತಾಮುಣಿ. ಸೋಣ ತಿಂಗ ಹೋಕಾವುಟು ಮಳೆಬ್ಯಾರೆ ಹಂಕಿಕಂಡೆ ಉಟ್ಟು. ಸುರಾಲ್‌ನ ಮಣ್ಕಾಲ್ ಮುಟ್ಟ ಮಡ್ಚಿಟು ಬೆನ್ನ್‌ಲಿ ಗೊರ್ಗ ಬ್ಯಾರೆ. ತಾಮುಣಿನ ಅವಸ್ತೆ ನೋಡಿ ಪಟೇಲನ ಯದೆ ಕರ್ಗಿಯೇ ಹೋತು. ಏ... ಅಮ್ಮುಣಿ ಯದ್ದೊಳಾ ತಾಮುಣಿ ಹೈದಂಗೆ ಒಂದು ಗಲಾಸ್ ಬಿಸಿ ಬಿಸಿ ಕಾಪಿ ತಗಂಡ್ ಬಾನೆ... ಪಟೇಲ ಯಜ್‌ಮಾನ್ತಿಗೆ ಆರ್ಡರ್ ಮಾಡ್ತ್.

ತಾಮುಣಿ ಪಟೇಲನ ಜಗ್ಲ್ ಮ್ಯಾಲೆ ಕುದ್ದತ್. ಕಾಲ್ ಬೆರ್ಳ್ ಸೆರೆಲಿ ಉಂಬುಳು ರಕ್ತ ಕುಡ್ದ್ ತೋರ ಆವುಟು. ಅದರ ಎಳ್ದ್ ತೆಗ್ದ್ ರಕ್ತ ಸೋರದಂಗೆ ಹೊಸ್ಸೊಪ್ಪು ಉಜ್ಜಿತ್. ಅಮ್ಮುಣಿ ಕಾಪಿ ತಾತ್. ಬಾಯ್ತುಂಬ ಯಲಡಿಕೆ ತುಂಬಿಸಿ ಕಂಡಿದ್ದ ಪಟೇಲ ಉಪ್ಪಾತಾ ಉಗ್ತ್.

ಮಾಮೂಲಾಗಿ ಪಟ್ನಕ್ಕೆ ಹೋಗವೆಲ್ಲಾ ಪಟೇಲನ ಮನೆ ಓಣಿಗಾಗಿಯೇ ದಾಟಿಕಂಡೇ ಹೋಕು. ಹಂಗಾಗಿ ಊರು ಜನಗಳ ಎಲ್ಲಾ ಇಚಾರ ಪಟೇಲಂಗೆ ಗೊತ್ತಿದದೆ. ಪಟೇಲಂಗೆ ಗೊತ್ತಿಲ್ಲದೆ ಯಾವ ಕೆಲ್ಸನೂ ಆಕೂ ಇಲ್ಲೆ.

ಪಟೇಲ ಮಾತಿಗೆ ಸುರು ಮಾಡ್ತ್. ಅದ್ ಸರಿ ಈ ಹೊತ್ತ್‌ಲಿ ಇದೆಲ್ಲಾ ತಗಂಡ್ ದೂರ ಹೊರ್ಟ ಮಂಜ? ಪಟೇಲ್ರೆ ಆ ಬಯಿನೆ ಮರದ ತುಂಡುಗೆ ಗಿಡ ಹಾಕೊಳೆ. ದರ್ಖಾಸ್ತಿಗೆ ಅರ್ಜಿ ಕೊಟ್ಟ್ ಆರ್ ತಿಂಗಾತ್. ಕಛೇರಿ ಎದ್ರಿಗೆ ಕುದ್ದೆದಲಾ. ಆ ದಡಿಯ... ತೋರದಂವ ಹೇಳ್ತ್. ನಾಳ್ದ್

ಶುಕ್ರಾರ ಬಾ... ಬಾಕನ ಬರಿ ಕೈಲಿ ಬರ್ಬ್ಯಡ. ಏನಾರ್ ತಗಂಡೇ ಬಾ... ಸಾಹೇಬ ಮಾಡಿ ಕೊಟ್ಟದೆತಾ. ಆ ಇಪ್ಪುಲಿ ಮರದಕ್ಕಲೆ ಇರ್ಲ್ ಪೂರಾ ಕುದ್ದೆ. ಒಂದು ಬರಿಕನಾನ ಕಂಡತ್ಲೆ. ಮತ್ತೆಂತ ಮಾಡ್ದು ಈ ಬಾಳೆ ಗೊನೆಗೂ ಸಾಕಿದ ದೊಡ್ಡ ಹುಂಜ ಕೋಳಿನೂ...

ಒಳ್ಳದಾತ್ ಅಣ್ಣಕೂಸು ನಿನ್ನ ಜಾಗಕ್ಕೆ ಪಟ್ಟೆ ನಾನ್ ಕೊಡ್ಸಿನೆ ನಾಕೈದ್ ಎಕ್ರೆ ಇರ್ದು ಅಲಾ... ಸೊಲ್ಪ ಕೂರು ಚೀಟಿ ಬರ್ದ್ದ್ ಕೊಟ್ನೆ ಸಾಹೆಬ್ಬಂಗೆ ಕೊಡು. ಈ ಪಟೇಲನ ಕಾಗದ ಇದ್ದರೆ ನಿನ್ನ ಕೆಲ್ಸ ಆದಾಂಗೆ. ವಳಗೆ ಹೋಗಿ ಚೀಟಿ ಬರ್ದ್ದ್ ಕವ್ರಿಗೆ ಹಾಕಿ ಅಂಟಿಸಿ ಕೊಟ್ಟೊ ಪಟೇಲರ್. ತಾಮುಣಿಗೆ ಕುಸಿ ಆತ್. ಚೀಟಿನ ತಗಂಡ್ ಕುಡ್ತದ ಜೇಬಿಗೆ ಹಾಕಂಡತ್.

ನಡ್ಕಂಡೇ ಬಂದ ತಾಮುಣಿ ಮಡಿಕೇರಿ ಕೊಟೇನ ಚೀಪು ಕಮೀಷನರ್ ಕಛೇರಿ ಮುಟ್ಟ್‌ಕನ ಸೂರ್ಯ ಕಾಣದಿದ್ದರೂ ನೆತ್ತಿ ಮೇಲೆ ಹೊತ್ತು ಏರಿಟು. ಹೋದಂವ ಬಾಗ್ಲ್ ಹಕ್ಕಲೇ ಬೊಗ್ಗಿ ನೋಡ್ತ್. ಓ ಯೇನ್ ಮಾರಾಯಂತ ಕೇಳ್ತ್ ಬಾಗ್ಲ್ ಕಾಯಂವ. ಸಾಹೇಬರ ನೋಡೊಕು. ಧನಿಗಳೆ ಈ ಸಲ ಯಂತದ್ದೂ ತಾಕೆ ಆತ್ಲೆ ಇರ್ಲ್ ಇಡಿ ಕುದ್ದದ್ದೇ ಬಾತ್. ಇನ್ನೊಮ್ಮೆ ಬಾಕನ ನೋಡ್ನೊ. ಬಾಗ್ಲ್ ಕಾಯಂವನ ಸಮದಾನ ಮಾಡ್ತ್ ತಾಮುಣಿ.

ಹೊರಗೆ ಸೊಲ್ಪ ಕುದ್ದ್‌ಕ ಸಾಹೇಬಂಗೆ ಹೇಳ್ನೆ. ಗೊರ್ಗನ ಗೋಡೆಗೆ ತಾಂಗಿಸಿ ಜಗ್ಲ್ ಮ್ಯಾಲೆ ತಾಮುಣಿ ಕುದ್ದತ್. ಹಂಞ ಹೊತ್ತು ಕಳ್ದ ಮ್ಯಾಲೆ ತಂಬಿ ತಾಮುಣಿನ ಕರ್ತ್. ಹುಂಜ ಕೋಳಿ ಮತ್ತೆ ಬಾಳೆಗೊನೆ ತಗಂಡ್ ತಾಮುಣಿ ಸಾಹೇಬನ ಕೊಂಬರೆಗೆ ಹೋತು. ಹುಂಜಕೋಳಿ – ಬಾಳೆಗೊನೆ ನೋಡಿ ಸಾಹೇಬಂಗೆ ಕುಸಿಯೋ ಕುಸಿ. ಏ ತಂಬಿ ಬಾ ಇಲ್ಲಿ ಇದರ ಬಂಗೆಲೆಗೆ ಕೊಟ್ಟ್ ಬಾ... ಆ ಮಾಚುಗೆ ಹೇಳ್ ಕತ್ತಲೆಗೆ ಒಂದು ಬಾಟ್ಲಿ ಬಳ್ಳ ಭತ್ತದ್ ತಂದ್ ಇಸಿಕೆ.

ಕುಡ ಜೋಬುಲಿ ಇಸಿಕಂಡಿದ್ದ ಕಾಗದವ ತಾಮುಣಿ ಮೆಲ್ಲಂಗೆ ತೆಗ್ದ್ದ್ ತಾಮುಣಿ ಸಾಹೇಬರ ಕೈಗೆ ಕೊಟ್ಟತ್. ಕವ್ರು ಒಡ್ದ್ ಕಾಗದನ ಒದಿದ ಸಾಹೇಬ ಹೇಳ್ತ್ ಓ ಪಟೇಲರ ಕಾಗದ. ಅವುಕೆ ಹೇಳ್ ಬ್ಯಾಗ ಕೆಲ್ಸ ಆದೆಂತಾ. ತಾಮುಣಿಗೆ ಕುಸಿಯೋ... ಕುಸಿ. ಸಾಹೆಬ್ಬಂಗೆ ಎರ್ಡ್ ಕೈ ಮುಗ್ದ್ದ್ ಹೊರಗೆ ಬಾತ್. ಎಸ್ಟ್ ಒಳ್ಳ ಪಟೇಲತಾ ಮನ್ಸ್‌ಲಿ ಹೊಗ್ಳಿ ಕಂಡತ್.

ಸೊಲ್ಪ ದೂರಲಿದ್ದ ಕಲ್ಲ್ ಬೆಂಚ್‌ನ ಮ್ಯಾಲೆ ಕುದ್ದ್ ತಂದ ಭುತ್ತಿನ ಬಿಚ್ಚಿ ಉಂಡತ್. ವಳಗೆ ಹೋಗಿ ತೋರದವನ ಹಕ್ಕಲೆ ಹೋಗಿ ನೆನ್ನೆ ಆತ್ಲೆ.

ನಾಳ್ದ್ ಶುಕ್ರಾರ ಬಾಕನ ಹೆಂಗಾರ್ ಮಾಡಿ ಕ್ಯಾಮ-ಬರಿಕ ಹೊಡ್ಕಂಡೇ ಬನ್ನೆ. ಅಂವ ತಲೆ ಅಲ್ಲಾಡಿಸಿತ್.

ಗೊರ್ಗ ಹಾಕಂಡ್. ಪೂವಯ್ಯ ಕಂಪೊಡ್ರು ಹತ್ರ ಬರಿಸ್ ಕುಡ್ದ್ ಮನೆ ಕಡೆ ಹೊರ್ಟತ್ ತಾಮುಣಿ. ಪಟೇಲನ ಮನೆ ಹಕ್ಕಲೆ ಬಾಕನ ಕಣ್ಣೇ ಕಾಂಬಲೆ ಕತ್ತ-ಕತ್ತಲೆ. ಪಟೇಲ ದೀಪ ಹಡ್ಕಂಡ್ ಹೊರಗೆ ಬಂದೊ. ಓ ಬಂದಾ... ಪಾಪ... ಕತ್ತಲಾಗೋತು. ಅಮ್ಮಣಿ ಬಾನೇ... ಒಂದು ಕುಪ್ಪಗೆ ಸೊಲ್ಪ ಯಣ್ಣೆ ಹೊಯ್ದ್ ಕೊಡು. ಬ್ಯಾಗ ಮನೆ ಸೇರಿಕಣ್ಲೆ ಸುಬ್ಬಂವ. ಹೆಣ್ಣಗೆ ಹೇಳ್ದ್. ಸಾಹೇಬ ಏನ್ ಹೇಳ್ತ್ ಬೆನ್ನ್ ಪೂಜಿ ಕೇಳ್ತ್. ಪಟೇಲನವುಕೆ ಹೇಳಿ ಬುಡು. ಸರಿ ಮಾಡಿ ಕೊಟ್ಟೆನೆಂತ ಹೇಳ್ದೊ. ಅಸ್ಟೊತ್ತಿಗೆ ದೊಂದಿ ಬಾತ್ ತಾಮುಣಿ ಮನೆ ಕಡೆ ಹೊರ್ಟತ್.

ನಡ್ಕಂಡ್ ಹೋಕಾಕನ ತಾಮುಣಿ ಮನ್ಸ್‌ಲೇ ಹೇಳಿಕಂತ್. ಎಲ್ಲವು ಹೇಳ್ವೆ ಈ ಪಟೇಲ. ಉಪದ್ರ ಮಾಡ್ದೇ ಜಾಸ್ತಿಗಡಾಂತ. ಏನೇ ಇರ್ಲಿ ನಂಗೆ ಉಪಕಾರ ಮಾಡ್ತಲಾ. ತಾಮುಣಿ ಮನೆ ಸೇರಿ ಜಾಗದ ಕನ್ಸ್ ಕಂಡ್‌ಕಂಡ್ ಸುಸ್ತಾಗಿ ಮಲ್ಗಿತ್. ಸಾಹೇಬಂಗೆ ಪಟೇಲ ಬರ್ದ್ ಕೊಟ್ಟ ಕಾಗದದ ಒಕ್ಕಣೆನಾ ನೀವು ಸೊಲ್ಪ ಕೇಳಿ.

ಮಾನ್ಯ ಚೀಫ್ ಕಮೀಷನರ್ ಸಾಹೇಬರವರಿಗೆ ಪಟೇಲನ ಪ್ರಣಾಮಗಳು.

ನನ್ನ ಗ್ರಾಮದ ಬಡ ಸಂಸಾರವೊಂದರ ರಾಜಿ ಪಂಚಾಯ್ತಿ ಇರುವುದರಿಂದ ಈ ದಿನ ತಮ್ಮನ್ನು ಬೇಟಿ ಮಾಡಲು ಸಾಧ್ಯವಾಗುತ್ತಿಲ್ಲ.

ನನ್ನ ಕೆಲಸದ ಆಳು ತಾಮುಣಿ ಎಂಬವನಲ್ಲಿ ನಿಮಗಾಗಿ ಪ್ರೀತಿಯಿಂದ ಹುಂಜ ಕೋಳಿ-ಬಾಳೆಗೊನೆ ಕಳುಹಿಸಿ ಕೊಡುತ್ತಿದ್ದೇನೆ. ದಯಮಾಡಿ ಪ್ರೀತಿ ಯಿಂದ ತೆಗೆದುಕೊಳ್ಳಿ. ಅಂದ ಹಾಗೆ ನನ್ನ ಮನೆ ಸಮೀಪದ 20 ಎಕ್ರೆ ಜಾಗವನ್ನು ಆದಷ್ಟು ಬೇಗ ಮಾಡಿಕೊಡಿ. ನಾನು ಮುಂದಿನ ವಾರ ಬರುತ್ತೇನೆ.

ತಮ್ಮ ನಂಬುಗೆಯ ಪಟೇಲ

ಈ ಪತ್ರದ ಸಂಗತಿ ನಿಧಾನಾಗಿ ಊರವುಕೆಲ್ಲಾ ಗೊತ್ತಾಕನ ಪಟೇಲಂಗೆ 20 ಎಕ್ರೆ ಪೈಸಾರಿ ಜಾಗ ಅವರ ಹೆಸ್ರ್‌ಗೆ ಮಂಜುರಾಗಿತ್ತ್. ಪಾಪದ ತಾಮುಣಿ ಮಾತ್ರ ಹತ್ತಾರ್ ಸಲ ಕಮೀಷನರ್ ಕಚೇರಿಗೆ ಹೋಗಿ ಹೋಗಿ ಸುಸ್ತಾಗಿ ಹೋಗಿತ್ತ್‌ಗಡ.

---

**ಸೂದನ ಎಸ್. ಈರಪ್ಪ**
ಪಾಲೂರು 7022707398




# ಬನ್ನಿ ಪುಸ್ತಕ ಓದೊಮೊ!!!

● ಪಿ.ಜಿ. ಅಂಬೆಕಲ್

ನಮ್ಮ "ಹಿಂಗಾರ"ದ ಇತ್ತೀಚೆನ ಸಂಚಿಕೆಗಳ್ಲಿ "ಬನ್ನಿ ಓದೊಮೊ"ಂತ ಹೇಳುವ ತಲೆಬರದ ಅಡಿಲಿ ಹೊಸ ಹೊಸ ಪುಸ್ತಕಗಳ ಪರಿಚಯ ಮಾಡುವ ಒಳ್ಳ ಲೇಖನಗ ಬರ್ತಾ ಉಟ್ಟು., ಅದಕ್ಕೆ ಪೂರಕವಾಗಿ ಓದು ಮತ್ತೆ ಪುಸ್ತಕಗಳ ಮಹತ್ವಗಳ ಬಗ್ಗೆ ನನ್ನದೊಂದು ಸಣ್ಣ ಒಗ್ಗರಣೆ ಅಷ್ಟೆ! "ಮಕ್ಕಳಿಗೆ ಆಸ್ತಿ ಮಾಡ್ದಕಿಂತ, ಮಕ್ಕಳ್ನೇ ಆಸ್ತಿನಾಂಗೆ ಮಾಡೊಕು"ಂತ ತಿಳ್ದವು ಹೇಳುವೆ. ಮಕ್ಕಳೇ ದೇಸದ ಆಸ್ತಿ ಆಕುಂತಾದರೆ ಪುಸ್ತಕದ ಸಂಸ್ಕಾರ ಬೇಕೇ ಬೇಕು. "ಪುಸ್ತಕಗ ಇನ್ನೂ ಹುಟ್ಟಿಕಿರುವ ಮಕ್ಕಳ ಆಸ್ತಿ" ಂತ ಜೋಸೆಫ್ ಎಡಿಸನ್‌ನ ಮಾತ್ನ ನಾವು ಅರ್ಥಮಾಡಿಕಣೊಕು. "ಮೊನ್ಸ ತನ್ನ ಮಕ್ಕಳಿಗೆ ಏನಾರ್ ಬುಟ್ಟು ಹೋಕೂಂತ ಇದ್ದರೆ ಅದ್ ಬೇಂಕ್‌ನ ಡೆಪೋಸಿಟ್ ಅಲ್ಲ, ಒಳ್ಳ ಪುಸ್ತಕಗಳ್‌ಂದ ತುಂಬಿದ ಮನೆ, ಗ್ರಂಥಾಲಯನ ಬುಟ್ಟು ಹೋಕು, ಅದರ್ಲಿ ಮೊನ್ಸಂಗೆ ಬೇಕಾದ್ದೆಲ್ಲಾ ಇದ್ದದೆ"ಂತ ಡಾ/ ಪಾಟೀಲಪುಟ್ಟಪ್ಪನವು ಹೇಳುವೆ. ಪುಸ್ತಕಗ ಹಿಂದೆನ ತಲೆಮಾರ್ನ ಅನುಭವ ಸಾರನ ತನ್ನ ಒಳಗೆ ಇಸಿಕಂಡ್, ಅದರ ಮುಂದೆನ ತಲೆಮಾರಿಗೆ ತಲ್ಪುಸುವ ಪಾಲ (ಸೇತುವೆ) ಆಗಿ ಅದ್ ಕೆಲ್ಸ



ಮಾಡ್ದೆ, ಗುರುವಾಗಿ, ಮಾರ್ಗದರ್ಸಕನಾಗಿ, ಜ್ಞಾನದ ಭಂಡಾರಾಗಿ, ಒಳ್ಳೆ ಹವ್ಯಾಸಾಗಿ, ಸಂಸ್ಕಾರಸಾಧನಾಗಿ ಕೆಲ್ಸ ಮಾಡುವೆ.

ದುಡ್ಡೊಂದು ಇದ್ದ್ ಬುಟ್ರೆ ಎಲ್ಲಾ ಸುಕ, ಸಂತೋಸನ ಅನುಬೋಗ್ಸಕ್‌ಂತ ಹೇಳ್ದು ಬರೀ ಭ್ರಮೆ! "ದುಡ್ಡ್‌ಂದ ಹೆಚ್ಚೆ ಕ್ರಯದ ಹಾಸಿಗೆನ ತಕಣಕ್ ಹೊರ್ತು, ನೆಮ್ಮದಿನ ನಿದ್ದೆನಲ್ಲ!" ಕೆಲವು ಜೆನ ನ್ಯಾಯ ಅನ್ನೆಯಗಳ ತಿಳಿಯದೆ ಯಾಗೊಳು ದುಡ್ಡುನ ಹಿಂದೆ ಬಿದ್ದ್ ತಮ್ಮ ಆರೋಗ್ಯ, ನೆಮ್ಮದಿನ ಕಳ್ಕಂಡವೆ. ಮೊನ್ಸಂಗೆ ಈಗ ನಾ ಹೇಂಗಾರ್ ದುಡ್ಡು ಮಾಡೊಕೂಂತ ಗ್ಯಾನ! "ಗಂಡಾಗುಂಡಿ ಮಾಡಿಯಾರು ಗಡಿಗೆ ತುಪ್ಪ ಕುಡಿಯೊಕು"ಂತ ಹೇಳುವಾಂಗೆ! ಹಾಂಗೆ ಮಾಡಿಕೆ ಹೋಗಿ ಮತ್ತೆ ಗುಂಡಿಗೆ ಬಿದ್ದವೆ. ದುಡ್ಡಿರ್ಕನ ಇರುವ ಜೋಸ್ತಿಗ, ಕೈ ಕಾಲಿಯಾಕನ ಇರ್ದುಲೆ. ಅವಂನ ತಲೆಗೆ ಅವಂದೇ ಕೈ. ಪುಸ್ತಕ ಪ್ರೀತಿಸುವವಂಗೆ ಅದಕಿಂತ ಒಳ್ಳೆ ಜೋಸ್ತಿ ಬೇರೆಯಾರೂ ಇಲ್ಲೆ. ಪುಸ್ತಕ ಮೊನ್ಸನ ಕಸ್ಟಲೂ ಸುಕಲೂ ಎಲ್ಲಾ ಕಾಲಲೂ ಮನ್ಸಿಗೆ ನೆಮ್ಮದಿನ ತಂದ್ ಕೊಟ್ಟದೆ. ಪುಸ್ತಕ ಯೌವನಲಿ ಮಾರ್ಗದರ್ಸಕನಾಂಗೆ, ಪ್ರಾಯ ಆಕನ ಮನ್ಸಿಗೆ ಶಾಂತಿನ, ಕುಸಿನ ತಂದ್ ಕೊಟ್ಟದೆ. ನಾ ದುಃಕಲಿ ಬೇಜಾರ್ಲಿ ಇರ್ಕನ ಡಿ.ವಿ.ಜಿ. ಯವರ "ಮಂಕು ತಿಮ್ಮನ ಕಗ್ಗ" ನ ಹಿಡ್ಕಂಡ್ ಓದಿಕೆ ಕುದ್ದನೆ. ಹಾಂಗೆ ಎಂತಾ ಬೇಜಾರ್ ಇರ್ಲಿ ಒಳ್ಳೆ ಪುಸ್ತಕನ ಹಿಡ್ಕಂಡ್ ಓದಿಕೆ ಕುದ್ದರೆ ಅವಂನ ಬೇಜಾರ್ ಎಲ್ಲಾ ಮರ್ತ್ ಹೋದೆ. ಅದಕ್ಕೇ " ಹಳ್ತ್ ಕೋಟು ಹಾಕಿ ಹೊಸ ಪುಸ್ತಕ ತಕಣಿ"ಂತ ಹೇಳ್ದು. ಪುಸ್ತಕ ಇಲ್ಲದ ಮನೆ ಆತ್ಮ ಇಲ್ಲದ ಸೈರದಾಂಗೆ. "ಸಾವಿರ ಸರೀರಗಳ ಆತ್ಮ ಸೊರೂಪವೇ ಪುಸ್ತಕ" "ಸಾಸನಗ ಸಾಯೊವ ಆದರೆ ಪುಸ್ತಕಗಳಿಗೆ ಎಂದಿಗೂ ಸಾವಿಲ್ಲೆ" ಇಂತಾ ಮಾತ್ಗ ಎಲ್ಲಾ ಪುಸ್ತಕಗಳ ಮಹತ್ವನ ಹೇಳುವೆ.

ಈಗನ ಹೆಚ್ಚಿನ ಜನಂಗಳಿಗೆ ಓದುವ ಅಬ್ಬೆಸನೇ ಮರ್ತ್ ಹೋಗುಟ್ಟುಂತ ಕಂಡದೆ. ಎಲ್ಲೋ ಕೆಲವು ಜೆನ ಓದೊವು ಇರ್ವೊ. ಈ ಟಿ.ವಿ. ಮೊಬೈಲ್, ಲ್ಯಾಪ್ – ಟಾಪ್ ಗ ಬಂದ ಮೇಲೆ ಎಲ್ಲವೂ ಅದರ ಹಿಂದೆನೇ ಬಿದ್ದವೆ. ನಮ್ಮ ದಿನದ ಹೆಚ್ಚಿನ ಹೆಚ್ಚಿನ ಹೊತ್ತುನ ಈ ಮೆಸಿನ್ಗ ನಾವುಗೆ ಗೊತ್ತಾಗದಾಂಗೆ ಅಪಹರ್ಸುವೆ. ದಿನ ಕಳ್ದಾಂಗೆ ಎಲ್ಲರ್ಲೂ ಈ ಅಬ್ಬೆಸಗ ಹೆಚ್ಚಾಗ್ತಾ ಉಟ್ಟು. ಈ ಟಿ.ವಿ.ನೇ ತಕಂಡ್ರೆ ಅದ್ ಕೆಲ್ಸನೂ, ಮನ್ಸನೂ ಹಾಳ್ ಮಾಡ್ದೆ. ಹೆಚ್ಚೆ ಹೊತ್ತು ನೋಡ್ದರ್‌ಂದ ಕಣ್ಣ್

ನ ಆರೋಗ್ಯ ಹಾಳ್, ವಿಕಿರ್ಣಂದ ಮೆದುಳ್ನ ಆರೋಗ್ಯಕ್ಕೂ ಹಾನಿ. ಉಂಬಕನ, ತಿಂಬಕನ ಅದರ್ನೇ ನೋಡಿಕಂಡ್ ಇದ್ದರೆ ತಿಂಬ ತಿನ್ಸ್ನಳ ರುಚಿನೂ  ಗೊತ್ತಿಲ್ಲೆ, ಎಸ್ಟ್ ತಿಂದೆಂತೂ ಗೊತ್ತಾದುಲ್ಲೆ. ಅಂಗ್ಡಿಲಿ ಸಿಕ್ಕುವ ಹಾಳ್ ಮೂಳ್ ತಿಂಡಿಗಳ ತಿಂದ್ ಕಂಡ್ ಕುದ್ದರೆ ಸೈರಲಿ ಬೇಡದ ಚೆರ್ಬಿ ಬಂದ್ ಹಲವಾರ್ ಹೊಸ ಕಾಯಿಲೆಗಳಿಗೆ ದಾರಿ ಮಾಡಿಕೊಟ್ಟದೆ. ಈಗ ಈ ಕೊರೋನಾಂತ ಹೇಳುವ ಮಹಾಮಾರಿ ಬಂದ್ ಲಾಕ್ ಡೌನ್, ಕರ್ಪ್ಯೂಗಳ್ಂದ ಜೆನ ಎಲ್ಲಾ ಮನೆಲೇ. ಅಪ್ಪ, ಅಮ್ಮಂಗೆ ಆಪೀಸಿಗೆ ಹೋಕೆ ಇಲ್ಲೆ, ಮಕ್ಕಳಿಗೆ ಸಾಲೆ ಇಲ್ಲೆ. ದೊಡ್ಡವುಕೆ ವರ್ಕ್ ಫ್ರಂ ಹೋಂ ಆದರೆ ಮಕ್ಕಳಿಗೆ ಆನ್ – ಲೈನ್ ಕ್ಲಾಸ್! ಇದ್ ಕೆಲವು ಜೆನ ಸೋಮಾರಿಗಳಿಗೆ "ತೂಕಡ್ಸಿದವಂಗೆ ಹಾಸಿಗೆ ಹಾಸಿ ಕೊಟ್ಟಾಂಗೆ" ಆಗುಟ್ಟು. ಮುಂದೇ ಈ ಕಂಪ್ಯೂಟರ್, ಲ್ಯಾಪ್ – ಟಾಪ್ ಲಿ ಕೆಲ್ಸ ಮಾಡೊವು, ಆಪೀಸ್ ಕೆಲ್ಸನೂ ಈಗ ಹೆಚ್ಚೇ, ಅದ್ ಮುಗ್ದರೂ ಜೆನ ಹಾಸಿಗೆ ಮೇಲೆ ಬಿದ್ದ್ ಕಂಡೋ, ಸೋಪಾದ ಮೇಲೆ ಮಲ್ಕಂಡೋ ಮೊಬೈಲ್, ಟಿ.ವಿ. ನೋಡಿಕಂಡೇ ಕಾಲ ಕಳ್ದವೆ! ಇನ್ನು ಮಕ್ಕಳಿಗೆ ಆನ್ – ಲೈನ್ ಕ್ಲಾಸ್ಗಳ್ಂದಾಗಿ ಮೊಬೈಲ್ ಗಳ ಕೊಡ್ದುಲ್ಲೇಂತ ಹೇಳ್ವಾಂಗೇ ಇಲ್ಲೆ.  ಹಿಂದೆ ಮೊಬೈಲಿ ಏನೋ ಆಟ ಆಡ್ತಿದ್ದ ಮಕ್ಕ ಈಗ ಏನೆಲ್ಲಾ ನೋಡಿಕೂ ಸುರುಮಾಡಿಯೊಳೊ!!! ಈ ವಿದ್ಯುನ್ಮಾನ ಮಾದ್ಯಮಗಳ ಅತಿಯಾಗಿ ಉಪಯೋಗ್ಸುದರ್ಂದ ಹೊಸ ಹೊಸ ಕಾಯಿಲೆಗ ಬಂದವೇಂತ ಡಾಕ್ಟ್ರಗಳೇ ಹೇಳುವೆ. ಕಣ್ಣಿನ ಕಾಯಿಲೆಯವು, ಮನ್ಸ್ ನ ಕಾಯಿಲೆಯವು ದಿನಂದ ದಿನಕ್ಕೆ ಹೆಚ್ಚಾಗ್ತಾನೇ ಒಳ ಗಡ! ಇನ್ನು ಸೈರದ ಬೇಡದ ಚೆರ್ಬಿ ಹೆಚ್ಚಾಗಿ ಗುಂಡಣ್ಣಂದರ್, ಗುಂಡಮ್ಮಂದರ್ ಕಂಬಕೆ ಎಸ್ಟೋ ಸಿಕ್ಕುವೆ.  ಅತಿಯಾದರೆ ಅಮೃತನೂ ವಿಸಂತ ಹೇಳುವಾಂಗೆ ಇದರ್ಂದ ಸೈರದ ಮಾತ್ರ ಅಲ್ಲ, ಮನ್ಸ್ನ, ಕಣ್ಣ್ ನ ಸಮಸ್ಯೆಗಳೊಟ್ಟಿಗೆ ಸಾಮಾಜಿಕ,  ಸಾಂಸ್ಕೃತಿಕ ಮತ್ತೆ ರಾಜಕೀಯ ಸಮಸ್ಯೆಗ ಕೂಡಾ ಹೆಚ್ಚಾಗ್ತಾ ಉಟ್ಟು. ವೈಜ್ಞಾನಿಕ ಸಂಸೋದನೆಗ ಮೊಬೈಲ್ ಟವರ್ಗಳ್ಂದ ಹೊರ್ಡುವ ವಿಕಿರಣಂದಾಗಿ ಊರುಲಿ ಗುಬ್ಬಿ ಹಕ್ಕಿಗಳೇ ಕಾಂಬಕೆ ಇಲ್ಲದಾಂಗೆ ಆಗುಟ್ಟು. ಮೊಬೈಲ್ ಗಳ್ಂದ ಹೊರ್ಡುವ ವಿಕಿರಣ ಹೇಂಗೆ ಜೈವಿಕ ವಿನಾಸಕ್ಕೆ ಕಾರಣ ಆದೇಂತ ಹೇಳುವೆ. ಮತ್ತೆ ಅತಿಯಾಗಿ ಉಪಯೋಗ್ಸುದರ್ಂದ ಮೆದುಳ್ನ ಕ್ಯಾನ್ಸರ್ಗೂ ಕಾರಣ ಆದೆ, ಸಂತಾನ ಸಕ್ತಿನೂ ಕಳ್ಕಂಡವೆಂತ ಹೇಳ್ತಾ ಉಟ್ಟು.  ಇದರೆಲ್ಲಾ ಸಾರಿ ಸಾರಿ

ಹೇಳ್ರೂ ಜೆನ ಮಾತ್ರ ಅದರ ಲೆಕ್ಕಕ್ಕೇ ತಕಣದೆ ಮೊಬೈಲ್ ದಾಸರಾಗಿ ಕಳ್ದ್ ಹೋಗೊಳೊ. ಮೊನ್ಸನ ಅನುಕೂಲಕ್ಕಾಗಿ ಸೃಷ್ಟಿಸಿದ ಈ ಸಾದನಗಳೇ ಮೊನ್ಸನ ಹಾನಿಗೆ ಕಾರಣ ಆವ "ಭಸ್ಮಾಸುರ" ಆಗದಹಾಂಗೆ ನಾವೇ ಎಚ್ಚರಲಿ ಇರೊಕು ಅಸ್ಟೇ!!!

ಈ ಟಿ.ವಿ. ಲ್ಯಾಪ್-ಟಾಪ್, ಮೊಬೈಲ್‌ಗಳ್‌ಂದಾಗಿ ಜೆನಕ್ಕೆ ಓದುವ ಅಬ್ಬೆಸನೇ ಮರ್ತ್ ಹೋದಾಂಗೆ ಕಂಡದೆ. ಇದರ್‌ಂದ ನಸ್ಟ ನಾವುಗೇ ಹೊರ್ತು ಪುಸ್ತಕಗಳಿಗಲ್ಲ. ಪುಸ್ತಕ ಓದುದರ್‌ಂದ ಸಿಕ್ಕುವ ತಿಳ್ವಳಿಕೆ, ಕುಸಿಗಳ, ನೆಮ್ಮದಿನ ನಾವು ಕಳ್ಕಂಡವೆ. ಪುಸ್ತಕ ಜ್ಞಾನದ ಸಂಕೇತ, ತಿಳ್ವಳಿಕೆನ ಆಕರ. ನೆಹರು ಹೇಳ್ವೆ "ಉತ್ತಮ ಗ್ರಂಥಗ ನಾಡ್ನ ಸಂಸ್ಕೃತಿನ ಪ್ರತೀಕ"ಂತ. "ಪುಸ್ತಕಗಂತೇಳ್ರೆ ನಮ್ಮೊಟ್ಟಿಗೆ ಮಾತಾಡುವ ಒಳ್ಳ ಜೋಸ್ತಿಗ"ಂತ ಸ್ವಾಮೀಜಿ ಒಬ್ಬ ಹೇಳ್ವೆ ಟಾಲ್ ಸ್ಟಾಯ್ ನ ಮಾತ್ಲಿ ಹೇಳ್ದೂಂತಾದರೆ "ಎಸ್ಟೇ ಪ್ರಾಯನೇ ಆಗಿರ್ಲಿ, ಯಾರ್ ಇನ್ನೂ ಓದುವ, ಕಲಿವ ಉತ್ಸಾಹಲಿ ಒಳನೋ ಅವ್ವೇ ಯುವಕರ್, ಕಲಿಕೆಗೆ ಗ್ರಂಥಗಳೇ ಗುರುಗ!" ಒಂದು ಒಳ್ಳ ಪುಸ್ತಕನ ಓದುದರ್‌ಂದ ನಮ್ಮ ಮನ್ಸ್ ನ ಭಾವನೆಗ ಹಿತವಾಗಿ ಅರ್ಳಿ, ಅದ್ ನಮ್ಮ ಬೇರೊಂದು ಲೋಕಕ್ಕೆ ತಕಂಡ್ ಹೋದೆ. ನಾವು ದಿನಾ ಮಾಡುವ ಕೆಲ್ಸಂದಾದ ಬೇಜಾರ್ನ ಕಳ್ದದೆ. ಓದುದರ್‌ಂದ ನಮ್ಮ ಚಿಂತನಾ ಸಕ್ತಿಹೆಚ್ಚಾದೆ, ಮನ್ಸ್ ವಿಶಾಲಾದೆ. ದಿನಲಿ ಬರೀ ಒಂದೆರ್ಡ್ ಗಂಟೆನಾರ್ ಓದುದರ್ಲಿ ಕಳಿಯೊಕು. ಸೈರದ ಆರೋಗ್ಯಕ್ಕೆ ವಾಕಿಂಗ್, ವ್ಯಾಯಾಮ, ಯೋಗ ಹೇಂಗೆ ಬೇಕೋ ಹಾಂಗೆ ಮನ್ಸ್‌ನ ಆರೋಗ್ಯಕ್ಕೆ ಓದು ಬೇಕು. ಓದುದರ್‌ಂದ ಎಸ್ಟೋ ಜೆನ ಮಹಾವ್ಯಕ್ತಿಗ ಆಗೊಳೊ. ಮಾಹಾತ್ಮ ಗಾಂಧಿಗೆ ರಸ್ಕಿನ್‌ನ "ಅನ್ ಟು ದಿ ಲಾಸ್ಟ್"ಂತ ಹೇಳುವ ಪುಸ್ತಕ ಸಿಕ್ಕಿ ಜೀವನನೇ ಬದ್ಲಿಸಿತ್ ಗಡ! ಹಂಗೇ ಬಿ. ಆರ್. ಅಂಬೇಡ್ಕರ್, ಬಾಲಗಂಗಾಧರ ತಿಲಕ, ಸರೋಜಿನಿ ನಾಯ್ಡು, ಅರವಿಂದರ್ ಮೊದ್ಲಾದವು ನಮ್ಮ ಡಿ.ವಿ.ಜಿ. ಕಾರಂತ, ಕುವೆಂಪು, ಬೇಂದ್ರೆ ಭೈರಪ್ಪ ಹೀಂಗೆ ಅನೇಕ ಸಾಹಿತಿ ಬೊದ್ಕುಲಿ ಓದುವ ಅಬ್ಬೆಸ ಇದ್ದರ್‌ಂದಲೇ ಪ್ರಖ್ಯಾತರಾದೊ. ಭಾರತದ ಶ್ರೇಷ್ಠ ಭೌತಶಾಸ್ತ್ರ ವಿಜ್ಞಾನಿ ಸರ್ ಸಿ.ವಿ. ರಾಮನ್ ತಮ್ಮ ಅಕೇರಿ ಸ್ವಾಸ ಬುಡುಕನೂ ಕೈಲಿ ಒಂದು ಪುಸ್ತಕ ಇತ್ತ್ ಗಡ.

ನಾವು ನಮ್ಮ ಬೊದ್ಕುಲಿ ರೂಡಿಸಿಕಂಬ ಒಳ್ಳ ಹವ್ಯಾಸಗಲ್ಲಿ ಓದುದು ಕೂಡ ಒಂದು ಆಕು. ಈ ಹವ್ಯಾಸ ಕಮ್ಮಿ ಕರ್ಚಿದ್., ಯಾವುದೇ ಹಾನಿ

ಇಲ್ಲದ್ದ್. ಪುಸ್ತಕ ಓದುವ ಹವ್ಯಾಸ ಇದ್ದವಂಗೆ ತಾನ್ ಒಂಟಿಂತೇಳುವ ಹೆದ್ರಿಕೆ ಇರ್ದುಲೆ. ಪುಸ್ತಕನೇ ಅವನ ಜೊತೆಗಾರ! ಓದುದರ್‌ಂದ ಬುದ್ದಿ ಚುರ್ಕಾದೆ, ವ್ಯವಹಾರ ಜ್ಞಾನ, ಉಲ್ಲಾಸ, ಮನೋರಂಜನೆ, ನೆಮ್ಮದಿ ಎಲ್ಲಾ ಸಿಕ್ಕಿದೆ. ಕತೆ, ಕಾದಂಬರಿ, ಕಾವ್ಯ, ಪ್ರವಾಸಕತನ, ಜೀವನ ಚರಿತ್ರೆ ಹೀಂಗೆ ಬೇರೆ ಬೇರೆ ರೀತಿನ ಪುಸ್ತಕಗಳ ಓದುದರ್‌ಂದ ಬೇರೆ ಬೇರೆ ರೀತಿನ ಅನುಬವ ಸಿಕ್ಕಿದೆ. ನಮ್ಮ ಬೊದ್ಕುನ ಶ್ರೀಮಂತಗೊಳ್ಸಿದೆ. ಮನ್ಸಿಗೆ ಬೇಜಾರಾಗಿದ್ದರೆ, ಕೋಪ ಬಂದ್ಕಂಡ್ ಇದ್ದರೆ, ಏನ್ಮಾಡ್ದೂಂತ ಚಿಂತೆಲಿ ಇರ್ಕನ ಎಲ್ಲಾ ಒಳ್ಳೊಳ್ಳೆ ಪುಸ್ತಕಗಳ ಓದಿರೆ ನಮ್ಮ ದುಃಕ ದುಮ್ಮಾನ ಎಲ್ಲಾ ಹೋಗಿ ಮನ್ಸಿಗೆ ನಿರಾಳತೆ, ಉಲ್ಲಾಸ ಬಂದದೆ. ಮನೆಲಿ ಒಂದು ಸಣ್ಣದಾದರೂ ಪುಸ್ತಕ ಭಂಡಾರ ಇರೊಕು, ಆಗ ಮನೆಲಿರುವ ಮಕ್ಕಸಾನ್ ಓದುವ ಅಬ್ಬೆಸ ಮಾಡಿಕಂಡವೆ. ಮುಖ್ಯ ಮನೆಲಿರುವ ದೊಡ್ಡವು ಓದುವಂತವು ಆಗಿದ್ದರೆ ಕಿರಿಯಲ್ಲೂ ಓದುವ ಆಸಕ್ತಿ ಬಂದದೆ. ಓದಿದರ ಅರ್ಥಮಾಡಿಕಂಡ್, ಅರ್ಗಿಸಿಕಂಡ್ ನಾವುಗೆ ಯಾವುದು ಒಳ್ಳೆದ್‌ಂತ ತಿಳ್ಕಂಡ್ ಬೊದ್ಕ್‌ಲಿ ಅಳವಡ್ಸಿಕಂಡರೆ ಓದು ಸಾರ್ಥಕವೂ, ಉಪಯುಕ್ತನೂ ಆದೆ. ಗೋಲ್ಡ್ ಸ್ಮಿತ್ ಹೇಳ್ದೆ "ಒಂದು ಒಳ್ಳೆ ಪುಸ್ತಕನ ಸುರುನ ಸರ್ತಿ ಓದುದು ಒಬ್ಬ ಒಳ್ಳೆ ಜೋಸ್ತಿನ ಪಡ್ಕಂಡ ಹಾಂಗೆ, ಈಗಾಗಲೇ ಓದಿದ ಪುಸ್ತಕನ ಮತ್ತೊಮ್ಮೆ ಓದುದು ಹಳೆ ಜೋಸ್ತಿನ ಮತ್ತೆ ಕಂಡ್ ಮಾತಾಡ್ದಾಂಗೆ"ಂತ. ಹಂಗಾಗಿ ನಮ್ಮ ಮನೆಗಳ್ಲಿ ಪುಸ್ತಕ ಸಂಸ್ಕೃತಿ ಬೆಳಿಯೊಕು, ಜ್ಞಾನಕ್ಕಾಗಿ, ಕುಸಿಗಾಗಿ, ನೆಮ್ಮದಿಗಾಗಿ, ಮನೋರಂಜನೆಗಾಗಿ, ಸಮಯದ ಸದುಪಯೋಗಕ್ಕಾಗಿ ಪುಸ್ತಕಗಳ ಓದೊಕು. ಹಂಗಾಗಿ ಎಲ್ಲಾ ಬನ್ನಿ ಪುಸ್ತಕ ಓದೊಮೊ.

**ಪಿ.ಜಿ. ಅಂಬೆಕಲ್**
# A 315, ಆರ್ಟ್ಸ್ -2.,
ಶ್ರೀ ಲಕ್ಷ್ಮೀ ನಾರಾಯಣ ದೇವಾಲಯದ ಹತ್ತಿರ.,
ಅಮೃತಹಳ್ಳಿ. ಬೆಂಗಳೂರು -560092.
ಮೊ.ನಂ. 9481390089.

# ಬನ್ನಿ ಓದೋಮ

**ವಸುಧೇಂದ್ರ ಕನ್ನಡದ ಒಬ್ಬ ಒಳ್ಳೆ ಕತೆಗಾರ,ಕಾದಂಬರಿಕಾರ,ಪ್ರಬಂಧಕಾರ. ಇಂಜಿನೀಯರ್ ಆಗಿ ಕೆಲ್ಸ ಮಾಡ್ತಿದ್ದ ವಸುಧೇಂದ್ರ, ಸಾಹಿತ್ಯದ ಆಸಕ್ತಿಯಿಂದ ಕೆಲ್ಸ ಬುಟ್ಟು, ಪೂರ್ಣ ಪ್ರಮಾಣಲಿ ಸಾಹಿತ್ಯಕ್ಕೆ ಪೂರಕವಾದ ಕೆಲ್ಸಲಿ ತೊಡಗಿಸಿಕಂಡ್, ಈಗ ಛಂದ ಹೇಳುವ ಪುಸ್ತಕ ಪ್ರಕಾಶನ ಸಂಸ್ಥೆ ಹುಟ್ಟು ಹಾಕಿಯೊಳೋ.**

**ವಸುಧೇಂದ್ರರ ಬರಹಗಳ್ನ ಓದುವ ಕುಸಿಯೆ ಬೇರೆ. ಸಂಬಂಧಗಳ ಮೂಸೆಲಿ ಅರಳುವ ಅವರ ಬರಹಗಳಲ್ಲಿ ಗಾಢವಾದ ಕೌಟುಂಬಿಕ ಪ್ರೀತಿ ವ್ಯಕ್ತ ಆದೆ. ಇಲ್ಲಿ ಅವರದೊಂದು ಸಣ್ಣ ಕತೆ ಹಾಕಿಯೊಳೋ. ಓದಿ ನೋಡಿ. ಸರಳವಾಗಿ, ಸಣ್ಣ ಸಂಗತಿಯೊಂದು ಎಷ್ಟು ನಮ್ಮನ್ನ ತಾಕಿದೆ ನೋಡಿ. ಸೂಕ್ಷ್ಮವಾಗಿ ಬರಹ ನಮ್ಮ ತಾಕಿ ಅಲ್ಲಾಡಿಸಿರೆ, ಅದ್ ಆ ಬರಹದ ಶಕ್ತಿ. ನಮ್ಮ ಅರೆಬಾಸೆಲಿ ಇಂತದೇ ಸಂಗತಿಗಳನ್ನ ಮತ್ತಷ್ಟು ತಟ್ಟುವಂಗೆ ಬರಿಯಕೆ ಆದೆಯಾ? ಪ್ರಯತ್ನಿಸಿ.**

ನಾನು ಪ್ರತಿ ಬಾರಿ ವಿದೇಶಕ್ಕೆ ಹೊರಟಾಗಲೂ ನನ್ನ ತಂದೆ – ತಾಯಿಯರಿಬ್ಬರೂ ಬಾಗಿಲಲ್ಲಿ ನಿಂತು ನನ್ನ ಕಾರು ರಸ್ತೆ ದಾಟುವ ತನಕ ಕೈ ಬೀಸುತ್ತಿದ್ದರು. ವಿಮಾನ ನಿಲ್ದಾಣಕ್ಕೇ ಬರುತ್ತೇವೆಂದು ಹಠ ಮಾಡುತ್ತಿದ್ದರಾದರೂ, ನಾನೇ "ಕೈಲಗಲ್ಲ, ವಯಸ್ಸಾಗಿದೆ" ಎಂದು ಬೇಡವೆನ್ನುತ್ತಿದ್ದೆ.

ಮನೆಯಿಂದ ಹೊರಡುವುದಕ್ಕೆ ಮುಂಚೆ ಹತ್ತಾರು ಬಾರಿಯಾದರೂ "ಬಡಾನ ಬಂದು ಬಿಡು, ತಡ ಮಾಡಬೇಡ" ಅಂತ ಹೇಳುತ್ತಿದ್ದರು. ಹೋಗುವುದಕ್ಕೆ ಮುಂಚೆ ಕಾಲಿಗೆ ನಮಸ್ಕಾರ ಮಾಡಿದರೆ ಗದ್ಗದಿತರಾಗಿ ನನ್ನ ತಲೆ, ಕೆನ್ನೆಯನ್ನು ಸವರಿ, "ಸುಸೂತ್ರ ಹೋಗಿ ಬಾಪ್ಪ" ಎಂದು ಆಶೀರ್ವಾದ ಮಾಡುತ್ತಿದ್ದರು. ನಾನು ಹಿಂತಿರುಗಿ

ಬರುವ ದಿನಕ್ಕಾಗಿ ಚಾತಕ ಪಕ್ಷಿಯಂತೆ ಕಾಯುತ್ತಿದ್ದರು.

ಇತ್ತೀಚೆಗೆ ನನ್ನ ತಂದೆ–ತಾಯಿಯರಿಬ್ಬರೂ ಕೆಲವೇ ದಿನಗಳ ಅಂತರದಲ್ಲಿ ತೀರಿಕೊಂಡರು. ಅವರಿಬ್ಬರ ದೇಹಕ್ಕೆ ಅಗ್ನಿಸ್ಪರ್ಶ ಮಾಡಿ, ಸಂಸ್ಕಾರ ಕಾರ್ಯಗಳನ್ನು ಮುಗಿಸಿದ ಮೇಲೆ ಮತ್ತೆ ನಾನು ವಿದೇಶಕ್ಕೆ ಹೋಗಬೇಕಾಗಿ ಬಂತು. ಹಿತೈಷಿಗಳಲ್ಲೊಬ್ಬರು, "ಮನೆಯಲ್ಲಿರುವ ವಸ್ತುಗಳಿಗೆ ಹಳೆಯ ಬಟ್ಟೆ ಹೊದಿಸಿ ಹಓಗಿ. ಇಲ್ಲದಿದ್ದರೆ ಧೂಳು ಕೂತು ಹಾಳಾಗುತ್ತವೆ" ಎಂದು ಸಲಹೆಯನ್ನಿತ್ತರು. ಹಳೆಯ ಬಟ್ಟೆಗಳಿಗಾಗಿ ಹುಡುಕಾಡಿದಾಗ ಸಿಕ್ಕಿದ್ದು ಅಮ್ಮನ ನಿತ್ಯ ಉಡುವ ಸೀರೆಗಳು, ಅಪ್ಪನ ಧೋತ್ರಗಳು. ಅವನ್ನೇ ಫ್ರಿಜ್ಜು, ವಾಷಿಂಗ್ ಮೆಷಿನ್, ಅಲಮಾರುಗಳಿಗೆಲ್ಲಾ ಹೊದಿಸಿದೆ. ಬಾಗಿಲು ಹಾಕಿ ಹೊರಟಾಗ ಮನಸ್ಸು ದುಃಖದಿಂದ ಕೂಡಿತ್ತು. ಕಣ್ಣುಗಳು ತೇವಗೊಂಡಿದ್ದವು. 'ಬಡಾನ ಬಂದುಬಿಡು' ಎಂಬ ಮಾತು ಈ ಬಾರಿಯಿರಲಿಲ್ಲ.

ಕಾರಿನಲ್ಲಿ ಕುಳಿತ ಮೇಲೆ ಪಾಸ್‌ಪೋರ್ಟ್ ಮರೆತದ್ದು ನೆನಪಾಗಿ ಮತ್ತೆ ಬಂದು ಬಾಗಿಲು ತೆರೆದೆ. ಒಳಗಿನ ದೃಶ್ಯ ನೋಡಿ ದಂಗಾಗಿ ಹೋದೆ.

ಮನೆಯ ತುಂಬೆಲ್ಲಾ ಅಪ್ಪ–ಅಮ್ಮ ನಿಂತಿದ್ದರು!!

ಅವರ ಬಟ್ಟೆ ಹೊದೆದು ನಿಂತ ನಿರ್ಜೀವ ವಸ್ತುಗಳವೆಂದು ತಿಳಿಯಲು ನನಗೆ ಕೆಲವು ಕ್ಷಣಗಳೇ ಬೇಕಾಯ್ತು.

# ನನ್ನ ಈ ಕೋಳಿಗಳ ಕಥೆ




ಮೂಡಲಿ ಸೂರ್ಯ ಬರ್ತಾ ಉಟ್ಟು
ಮರದಲ್ಲಿದ್ದ ಹುಂಜ ಕೂಂಗಿಕೆ ಶುರು ಮಾಡ್ತ್
ಮನೆಲಿರುವ ಜನಗಳ ಎಬ್ಬಿಸಿತ್
ಗೂಡ್ಲಿರುವ ಹೆಂಟೆಗಳನೂ ಎಬ್ಬಿಸಿತ್;
ಕೇರಿಕೆ ಪೋಯಿ ಅಂತ ಹೇಳ್ತ್...

ಗೂಡ್‌ಲಿ ಇದ್ದ ಕೋಳಿಗ ಹೊರಗೆ ಬಂದ;
ಮೈಲಿ ಇದ್ದ ಬೂದಿಗಳ ಕೊಡ್ಕ್‌ಸಿದ
ಮರಲಿ ಇದ್ದ ಕೋಳಿಗ ಹಾರಿ ಕೆಳಗೆ ಇಳ್ದೊ
ಹುಂಜನೂ ಕುಟುಕುಟು ಮಾಡಿಕಂಡ್ ಕೇರಿಕೆ ಹೋತ್
ಹುಂಜ ಕೇರಿ ಕೊಟ್ಟಂಗೆ ಹೇಂಟೆ ಪಿಳ್ಳೆಗೆ ತಿನ್ನಿಸಿತ್ತ್...

ಆಕಾಶಲಿ ಗಿಡ್‌ಂಞ ಕಂಡರೆ ಸಾಕ್;
ಹುಂಜನು ಎಲ್ಲವುಕು ಸೂಚನೆ ಕೊಡ್ದು
ಜಾಗ್ರತೆ ಮಾಡಿಕಣಿ ಅಂತ ಬೊಬ್ಬೆ ಹಾಕುದು
ಹೆಂಟೆ ಪಿಳ್ಳೆಗಳ ರೆಕ್ಕೆನಡಿಲಿ ಅಡಗಿಸ್ಕಂಬೊದು...

ಒಂದು ಹೆಂಟೆ ಕುಕ್ಕುಕುಕ್ಕು ಅಂತ ಮೊಟ್ಟೆ ಇಸಿಕೆ ಹೋದು
ದಿನಾಲೂ ಹೋಕನ ಬೊಬ್ಬೆ ಹಾಕಂಡೆ ಹೋದು
ಇಪ್ಪತ್ತೊಂದು ದಿನ ಕಾವುನು ಕುದ್ರುದು
ಪಿಳ್ಳೆಗ ಮೊಟ್ಟೆಂದ ಬಂದ ಮೇಲೆ; ಯಾರನು ಬಾಕೆ ಬುಡಿಕಿಲೆ ಈ ಹೆಂಟೆ...

ಹಿಂಬೊತ್ತುನು ಆಕಂಡ್ ಬಾದು
ಹೆಂಟೆ ಪಿಳ್ಳೆಗಳ ಕರ್‌ಕಂಡ್ ಗೂಡುಗೆ ಸೇರ್ದು
ಕೆಲವು ಕೋಳಿಗ ಮರಲಿ ಹಾರಿ ಕುದ್ರುದು
ಅಲ್ಲಿ ಕುದ್ದು ಜೋರಾಗಿ ಕೂಂಗಿ ಮಲ್ಕಣುವ...
ಹಿಂಗೆ ಉಟ್ಟು ನನ್ನ ಈ ಕೋಳಿಗಳ ಕತೆ...
ಮರಿಯಕೆ ಆಕಿಲೆ ಈ ಕೋಳಿಗಳ ಕತೆ!

● ಸಿಂಚನ ಕೆ.ಯನ್.

# ಬಾ ಹಕ್ಕಲೆ

ಓ ನನ್ನ ಹಳೆ ನೆನ್ಪೇ ಎಲ್ಲಿ ಒಳ ನೀ, ಬಾ ಹಕ್ಕಲೆ
ಬಂದಿಲ್ಲಿ ನೆಲ್ಸ್ ಶಾಶ್ವತಲಿ ನನ್ನ ಎದೆಯೊಳೆಗೆ ।
ಮುಪ್ಪ್‌ನ ತಿಮಿರಲಿ ಆಗುಟು ಎಲ್ಲಾ ಮಂಜ್ ಮಂಜ್
ಕಾಲ ಬೊದ್ಕ್‌ಗಳೆಲ್ಲನೂ ಮಂಜ್, ಏನ್ ಈ ಪ್ರಕೃತಿ ನಿಯಮ ॥ 1 ॥

ಇತ್ತೊಂದ್ ಕಾಲ ಬಾಲ್ಯ, ಎಲ್ಲನೂ ಸಂತೋಷ ಸಡಗರ
ಬಾನ್‌ನ ನೆಲಕ್ಕಿಳ್ಸಿ ಎತ್ತಿ ಕುಕ್ಕುವ ಭ್ರಮೆ ।
ಬ್ರಹ್ಮಗಿರಿನ ನೆತ್ತಿಮೇಲೇರಿ ಧುಮ್‌ಕ್‌ವ ಛಲ
ಎಲ್ಲಿ ಇಂಗಿತೋ ಆ ಸಾಹಸ, ಬಾ ಹಕ್ಕಲೆ, ನನ್ನ ಹಕ್ಕಲೆ ॥ 2 ॥

ಬೆಟ್ಟ ಹತ್ತಿದ ಹುರ್‌ಪ್, ಬೇಟೆಯಾಡ್‌ದ ಬಿರ್‌ಸ್
ಹೊಳೆನ ನೀರಾಟಲಿ ದಣ್‌ದ ಸುಖ, ಪರಿಸರದ ಆನಂದ ।
ಬಂದುಗ ಎಲ್ಲ ಬೆರೆತ್ ಮೈಮರ್‌ತ ಹಬ್ಬಹರಿದಿನಗ
ಎಲ್ಲನೂ ಈಗ ಅಸ್ಪಷ್ಟ, ನೆನ್ಪೇ ಬಾ ಹಕ್ಕಲೆ, ನನ್ನ ಹಕ್ಕಲೆ ॥ 3 ॥

ಇಂದ್‌ಗೂ ಕುಸಿನೀಡ್ದೆ ಜೊತೆಗಿದ್ದ ಸೊಬಗ್
ಮೆರ್‌ಗ್ ಕೊಟ್ಟತ್ ನನ್ನವಳ ಒಲೊವುನ ಬೆಸ್‌ಗೆ ।
ಕಟ್ಟಿದೊ ನಾವ್ ಪಿಸ್‌ಮಾತ್‌ಲಿ ಕನ್ಸ್‌ನಾ ಸೌದಗಳ
ಮಂಪರ್‌ಲಿ ರಸಲೀಲೆಗಳ ಸವಿಯುಂಡ ನೆನ್ಪ್ ॥ 4 ॥

ಹೆಪ್ಪುಗಟ್ಟಿತ್ ಹುರುಪ್ ಸಮಯದ ಆಘಾತಲಿ
ಇನ್ನೆಲ್ಲಿ ಉಲ್ಲಾಸ ಮನ್ಸ್‌ನ ಗರಿ ಮುದ್‌ರಿ ಹೋಗಿ!
ಹಿರಿಯರ ಹರ್‌ಕೆಗಳೇ ಶ್ರೀರಕ್ಷೆ, ನನ್ನ ತೃಷೆಗೆ ಕಾವೇರಿ ತೀರ್ಥ
ಬೀಳ್ಕೊಡಿಸಿ ಸಂತಸಲಿ ಬನ್ನಿ ನೆನ್ಪ್‌ಗಳೆ, ಬನ್ನಿ ಹಕ್ಕಲೆ, ನನ್ನ ಹಕ್ಕಲೆ ॥5॥

**ಮಾವಜಿ ರಾಮಣ್ಣ ಅಚ್ಚುತ**
#606, 7ನೇ ಮೈನ್, 3ನೇ ಬ್ಲಾಕ್
3ನೇ ಸ್ಟೇಜ್, ಬಸವೇಶ್ವರ ನಗರ, ಬೆಂಗಳೂರು–560 079
98455 53206

# ಜೀವನ..!




ಯಾಕೋ ಏನೋ ಮನಸ್ಲಿ ತಳಮಳ
ಎಂಥನೋ ಕಳ್ಕಣ್ತಾ ಒಳೋ..
ಜೀವನ ಎತ್ತಲೋ ಹೋಗ್ತಾ ಉಟ್ಟು
ಸಮಾಜಲಿ ಆಗ್ತರ್ದೇನೋ..?
ಉತ್ತರ ಹುಡ್ಕಿರೆ ಸಿಕ್ತಿಲ್ಲೆ..!

ಒಂದಷ್ಟ್ ವರ್ಸ ಹಿಂದಕ್ಕೆ ಪೋಯಾ..?
ಆಗ..., ಇಸ್ಕೂಲ್ ತುಂಬಾ ಮಕ್ಕ
ಆಟ–ಒಟ–ಪಾಟ
ವರ್ಸಕ್ಕೊಮ್ಮೆ ಎಲ್ಲ ಸೇರಿಕಂಡ್
ವಾರ್ಸಿಕೋತ್ಸವ– ಊರಿಗೇ ಅದು ಹಬ್ಬ..

ಊರವೆಲ್ಲ ಸೇರಿ ಹಾಕುವ ಚಪ್ಪರ
ಕೂಡು ಕುಟುಂಬ ಸೇರಿ ದಿಬ್ಬಣ
ಒಡ್ಡೋಲಗದ ಮೆವಣಿಗೆ
ಏಳ್ ದಿನಗಳ ಮೊದ್ವೆ
ಎರಡ್ ಹಳ್ಳಿಗೆ ಸಿಂಗಾರ

ಅತ್ತ ನೋಡಿರೆ ದನ–ಕರ್ಗ
ಇತ್ತ ನೋಡಿರೆ ಬಣ್ಣ –ಬಂಗಾರ
ಮಕ್ಕ–ದೊಡ್ಡವರ ಸಡಗರ
ತಿರ್ಗುವ ಚಕ್ರ ಗರಗರ
ಬಾಣೆಲಿ ಜಾಗೆನೇ ಇಲ್ಲೆ– ಜಾತ್ರೆ
ಈಗ..?
ಅದೋ., ಈಗಲೂ ಅಲ್ಲಿ ಜನ ಸರ್ಯೊಳೋ
ಅಯ್ಯೋ ಎಲ್ಲ ಟರ್ವೇ..?
ಹೋ ಸಾವ್ಕಾರ ತಿಮ್ಮಪ್ಪ
ಅವನೊಟ್ಟಿಗೆ ದನ ಕಾಯುವ ತಿಪ್ಪ
ಪ್ರಕೃತಿ ಕೊಟ್ಟ ಶಾಪಕ್ಕೆ ಜೀವನ ಬಲಿ..!

ಅಯ್ಯೋ ಇಲ್ಲಿನೂ ಜನ ಸರ್ಯೊಳೋ
ಅದೆಂತಕ್ಕೆ ಅಲ್ಲಿ ದೊಡ್ಡ ಸಾಲ್–ಜಗಳ..?
ಜೀವ ಉಳ್ಸಿಕಣಿಕೆ ಧಾವಂತ
ವ್ಯಾಕಿನ್ ಸಿಗದೆ ಪರದಾಟ
ಕೊಲ್ಲುವ ಕಾಯಿಲೆ ಕೊರೊನಾಕೆ ಮದ್ದಿಲ್ಲೆ..!

ಅಷ್ಟೊಂದು ಲಾಯ್ಕಿದ್ದ ಜೀವನ ಈಗ..?
ಮಳೆಗಾಲ ಬಂದರೆ ಹೆದ್ರಿಕೆ
ಮಕ್ಕಳಿಗೆ ಇಸ್ಕೂಲ್ ಇಲ್ಲೆ
ಜಾತ್ರೆ–ಹಬ್ಬ–ಮೊದ್ವೆ ದೂರ..
ಜೀವ ಒಳ್ದರೆ ಸಾಕ್
ಹೆಂಗಾರ್ ಜೀವನ ಮಾಡಕ್ತೇಳ್ವ
ಒಂದು ಯಾಂತ್ರಿಕ ಪಯಣ ಅಷ್ಟೇ..!?

● **ಕುಡೆಕಲ್ ಸಂತೋಷ್**




# ಮಣೆ ಮತ್ತೆ ಮುಕ್ಕಾಲ್



● ತೆಕ್ಕಡೆ .ಬಿ. ಕುಮಾರಸ್ವಾಮಿ

'ಹಾಕ್ಮಣೆ ನೋಕ್ಮಣೆ ಯಾಕ್ಮಣೆ' ಇದೊಂದು ಗಾದೆ ಮಾತ್. ಮದುವೆ ಆದ ಹೊಸದರ್ಲಿ ಅಳಿಯ ಅತ್ತೆ ಮನೆಗೆ ಬಂದದೆ. ಸುರುಗೆ ಅಳಿಯ ತೇಳಿರೆ ಅತ್ತೆಗೆ ದೇವುರ ಸಮ. ಅಳಿಯ ದೇವುರು ತಾ ಆಗ ಆಗ ಮನೆಗೆ ಬರ್ತಾ ಇದ್ದದೆ. ಅದಿಕೆ ತನೆ ಹೇಳ್ದು ಹೇಲಿಕೂ ಅತ್ತೆ ಮನೆಗೂ ಹೋಗದೆ ಇರಿಕೆ ಅದೆನಾತ. ಹೊರಗಡೆ ಆಟ ಆಡಿಕಂಡ್ ಇದ್ದ ಮಕ್ಕ, ಮಾವ ಬಾತ್‌ತ ಬೊಬ್ಬೆ ಹಾಕುವೆ. ನಾಯಿಗ ಬಾಲ ಅಲ್ಲಾಡ್ಸಿಕಂಡೆ ಬೊಗುಳುವೆ. ಕುಕ್ಕೆಲಿ ಮಲ್ಗಿದ ಬೋಗ್ಗಿ ನಾಯಿ ಅಲ್ಲಿಗೆ ಸುರ್‌ಂಟಿ ಮಲ್ಗಿ ಬಾಲ ಬಡಿಯೋದು ಮಾತ್ರ ಕಂಡಂದೆ. ಜಗ್‌ಲ್‌ಲಿ ತಲೆಂದ ಹೇನ್ ಬಾಚ್‌ತಿದ್ದ ನಾದ್‌ನಿ ಬಾಚಣಿ ಹಿಡ್ಕಂಡೆ ಒಳಗೆ ಓಡ್ದೆ. ಅವ್ವ ಅವ್ವ ಬಾವ ಬಂದೋ. ಮನೆ ಹತ್ತಿ ಬಂದ ಅಳಿಯ ನಡು ಮನೆಗೆ ಬಂದದರ ನೋಡ್ದ ಅತ್ತೆ, ಮಗಳಿಗೆ ಹಿಂಗೆ ಹೇಳಿರ್ದು, 'ಹಾಕ್ಮಣೆ'ತ ಹಿಂದೆ ಮಣೆ ತೇಳ್ದು ಗೌರವದ ಸಂಕೇತ ಆಗಿರ್ದು. ಮಖ 'ನೋಡಿ ಮಣೆ ಹಾಕುವೆ'. ತೇಳುವ ಗಾದೆ ಮಾತ್ ಒಂದು ಕಡೆ ಉಟ್ಟು. ಇದ್ ಪರಿಸ್ಥಿತಿ ಮತ್ತೆ ಸಂದರ್ಭ ನಡ್ತೆ. ಹಂಗ್ಯಾಗಿ ಮುಖ ನೋಡಿ ಮಣೆ ಹಾಕ್ಬಡತ ಕೆಲವಷ್ಟು ಸಂದರ್ಭಲಿ ಕೇಳಿ ಬರುವ ಇನ್ನೊಂದು ಸಾಂದರ್ಭಿಕ ಮಾತ್. ಆದರೆ ಇಲ್ಲೆ ಅಂವಂದ ಏನಾದರ್ ಉಪಾಯ ಇದ್ದರೆ ನೋಣೆಂದ ಮಾತಾಡುವೆ. ಅಂವನ ಯಾವುದೇ ಕೆಲ್ಸ ಅದರ್ೂ್ನ ಸರಿ, ಅಂವಗೆ ಎಡೆ ಮಾಡಿ ಕೊಡುವವೆ ಹೆಚ್ಚಿಗೆ. ಆ ಸಂದರ್ಭಕ್ಕೆ ಮಣೆ ಹಾಕುದು ತೇಳುವ ಪದ ಬಳಕೆ ಆದು. ಅಳಿಯ ತೇಳಂವ ಬಹಳ ಎತ್ತರಲಿ ಇರುವ ವ್ಯಕ್ತಿತಾ ಅಂವಂಗೆ ಕೊಡುವ ಸ್ಥಾನ. ಅಳಿಯ ದೇವುರುತ ತಿಳ್ಕಂಡವು ಅಳಿಯ ಬಂದ್ ಎಷ್ಟ ಹೊತ್ತಾತ್, ಅಂವ ಏನಾದರ್ ತಿಳ್ಕಂಬೊದೋ ಏನೋ ತ ಹಿಂಗೆ ಆತುರಂದ ಹಾಕ್ಮಣೆತ ಅವ್ವನ ಆದೇಶ ಮಗಳಿಗೆ ಆಗಿರ್ದು.

ತಿಂಗ ಕಳೀತಾ ಬಾತ್. ಅಳಿಯ ಬಂದ್ ಹೋಗುವ ಸಂದರ್ಭಗಳ ಎಡೆಗ ದೂರ ಆದೆ. ಯಾರು ಸನ ಅಳಿಯ ಬಾದರ್ನ ಕಂಡ್ ಕರ್ದ್ ಹೇಳ್ದುಲೆ. ನಾಯಿಗಳಿಗೂ ಸನ ಮರ್ತ್ ಹೋದಂಗೆ ಆಗಿಟ್ಟು. ಜೋರಾಗಿ

ಬಗುಳುವೆ. ಕುಕ್ಕೆಲಿ ಮಲ್ಗಿದ ಬೋಗ್ಗಿ ನಾಯಿ ಮರಿ ಹಾಕಿ ಮಲ್ಗಿಟು. ಮರಿನ ಸುದ್ದಿಗೆ ಬಾದುತಾ ಕಚ್ಚಿಕೆ ಹೋದೆ. ಅತ್ತೆ ಅಳಿಯ ಬಂದದರ್ನ ನೋಡಿ, ಅಲ್ಲೆ ಇದ್ದ ಮಣೆನ ನೂಕಿಕೆ ಹೇಳ್ದ. ಇದೇ ನೂಕ್ಮಣೆ ಇರ್ದು. ಬೇಕರೆ ಅಳಿಯ ತಳ್ಳಿದ ಮಣೆನ ಎಳ್ಕಂಡ್ ಕುದ್ದುರೋಕು ಅಷ್ಟೆ. ಇಲ್ಲಿ ಹಳ್ತಾದಂಗೆ ಸಂಬಂಧ ದೂರಾದೆ ತೇಳುವ ಭಾವ ಮಿಡ್ದದೆ. ಹಿಂಗೆ ಹೋಕ್ತಾ ಹೋಕ್ತಾ ನೆಂಟತನ ಅಷ್ಟಕ್ಕೆ ಅಷ್ಟೆ ಬೇಡಾತಾದೆ. ಮತ್ತೆ ಬಂದವನ ಕಂಡ ಮರಿಮಕ್ಕಳೋ ಏನೋ ತಾತ ಬಾತ್‌ತ ತೇಳುವೆ. ಆಗ ಅತ್ತೆನ ಬಾಯಿಂದ ಬರುವ ಮಾತ್ ಹಿಂಗೆ ಇರ್ದು ಯಾಕ್ಮಣೆ. ಮಣೆ ಇಲ್ಲದ್ದಿದರ್ನೂ ಪರ್ವಾಗಿ ಇಲ್ಲೆ ನಡ್ದದೆ. ಅವಶ್ಯಕತೆ ಅಷ್ಟಕ್ಕೆ ಅಷ್ಟೆ. ಇದ್ ಒಂದು ತರದ ಅಸಡ್ಡೆ ವರ್ತನೆ. ಸಂಬಂಧಗ ಹಳ್ಸಿದೆ. ಸಂಬಂಧನು ಅಷ್ಟೆ. ನಾವು ಬಳ್ಸುವ ಯಾವುದೇ ವಸ್ತು ಅಷ್ಟೆ. ಅದ್ ಚಿನ್ನ ಆಗಿದ್ದರೂ ಅಷ್ಟೆ. ಹಂಗೆನೆ ಹಿಂದೆ ಇದ್ದ ಪರಿಸ್ಥಿತಿ ಈಗ ಇಲ್ಲೆ. ಹಿಂಗೆ ವಸ್ತುನ ಬಳಕೆ ಸುರುಲಿ, ಮನ್ಸನ ಪರಿಚಯ ಸುರುಲಿ ಇರುವ ಪ್ರೀತಿ ಮತ್ತೆ ಬಾಂಧವ್ಯ ಕಡೆ ಕಡೆಗೆ ಇರ್ದುಲೆ. ಆರಂಭಲಿ ಒಬ್ಬನ ಮೇಲೆ ತೋರ್ಸುವ ಪ್ರೀತಿ ವಿಶ್ವಾಸ ಹಳ್ತಾದಂಗೆ ಕಾಟಚಾರಕ್ಕೆ, ಮತ್ತೆ ಕಡೆಗೆ ಮೂಲೆ ಸೇರ್ದೆ. ಒಟ್ಟಾರೆ ಪರಿಚಯ ಮೂರು ಹಂತಲಿ ಮೂಲೆ ಸೇರ್ದೆ. ಇದ್ ಮನ್ಸನ ಸ್ವಾಭಾವನ ಈ ಗಾದೆ ಮಾತಲಿ ಕಾಣಕ್. ಹಾಕ್ಮಣೆ, ನೂಕ್ಮಣೆ, ಯಾಕ್ಮಣೆ ತೇಳುವ ಮೂರೆ ಮೂರು ಒಕ್ಕಣೆಲಿ ದೊಡ್ಡ ಒಂದು ವಿಚಾರಧಾರೆ ಸೆರೆಹಿಡ್ದುಟ್ಟು. ಹಿಂಗೆ ಒಂದು ಸಣ್ಣ ರೂಪದ ಭಾವಾರ್ಥ ಮಣೆ ಮೇಲೆ ಹೆಣ್ಣ್‌ದ ಕಟು ಸತ್ಯದ ಮಾತ್. ಇನ್ನೊಂದು ಕಡೆ ಎಂತ ದೊಡ್ಡ ಜಂಬರ ಮಾಡ್ದರೂ ದೇವುರಿಗೆ ದೀಪ ಇಸಿ ಹೆಳಿಕಂಬದು ಇಷ್ಟೆ ಎರ್ಡ್ ಮಾತ್ ಹೇಳಿಕಣಿತ.

ಅನಾಗರಿಕತೆ ಕಾಲಲಿ ಮನ್ಸ ಕಾಡ್‌ಲಿ ವಾಸ ಮಾಡ್ತಾ ಇದ್ದ ಕಾಲ ಅದ್. ಕೂರುಕನ ಯಾವುದೋ ಒಂದು ವಸ್ತುನ ಏಳ್ದ್ ತಿಕದ ಅಡಿಗೆ ಇಸಿ ಕುದ್ದಿರ್ದು. ಅದ್ ಕಲ್ಲ್, ಮರದ ತುಂಡು, ಇಲ್ಲೆ ಮರದ ಬೇರ್ ಆಗಿರುರ್ದು. ಮುಂದೆ ಅದರ್ನ ತಾನ್ ಕುದ್ದ್ ಮಾಡುವ ಕೆಲ್ಸಗಳಿಗೆ ಬಳ್ಸಿಕಂಡಿರ್ದು. ನಾಗರಿಕತೆ ಬೆಳ್ದಂಗೆ ಅದ್ ತನ್ನ ಅವಶ್ಯಕತೆನ, ಬದಕ್‌ನ, ಸಂಪ್ರದಾಯದ ಒಂದು ಭಾಗ ಆಗಿರುವ ಸಾಧ್ಯತೆ ಆತ್. ಅಲ್ಲಿಂದ ಮುಂದೆ ಹುಟ್ಟಿಕಂಡ ಜನಾಂಗಂದ ಇಲ್ಲಿನ ವರೆಗೆ ಉಳ್ಕಂಡ್ ಬಂದಿರುವ ಸಾಧ್ಯತೆನ ನಂಬಕ್. ಆಗ ಬಳ್ಸಿದ, ಈಗ ಬಳ್ಸ್‌ತ ಇರುವ ಆ ಒಂದು ಸಾಧನ ನಮ್ಮ ಜನಾಂಗಲಿ ನಮ್ಮ ಭಾಷೆಲಿ ಮಣೆ, ಮುಕ್ಕಾಲ್ ತೇಳುವ

ಹೆಸರ್‌ಂದ ಇಂದ್ ಗುರ್ತಿಸಿಕಂಡ್ ಉಟ್ಟು, ಇರ್ದು ತೇಳ್ದು ನನ್ನ ಅನಿಸಿಕೆ ಅಷ್ಟೆ. ಕುದ್ದುರುವ ಆ ಸಾಧನ ಪೀಠ, ಸಿಂಹಾಸನ ಸನ ಆಗಿರ್ದು. ಆ ಕಾಲ ಘಟ್ಟಕ್ಕೆ ಹಿರಿಯಂವ ಕುದ್ದಿರ್ದು, ದೇವುರು ತೇಳುವ ನಂಬಿಕೆ ಕುದ್ದಿರ್ದು. ಕುದ್ದುದ್ರಿಸಿ ಸತ್ಕಾರ ಮಾಡಿರುವ. ಕೆಲವೊಂದು ಆಚರಣೆ ಮಾಡಿರುವ. ಹಿಂಗೆ ಬಂದ ಆ ಮಣೆ ಮುಕ್ಕಾಲ್ ನಮ್ಮ ನಿಮ್ಮ ಎಡೆಲಿ ಇಂದಿಗೂ ಉಟ್ಟು.

ಅಂದ್ ಇಂದ್ ಇರುವಂಗೆ ಬೆಂಚಿ, ಕುರ್ಚಿ, ಡೈನಿಂಗ್ ಟೇಬಲ್ ಇತ್ತಲೆ. ಯಾವುದೇ ಜಂಬರ ಇರ್ದು, ನೆಂಟ್ರೆ ಬಾಕನ ಆದು. ಮಣೆ ಇಸ್, ಚಾಪೆ ಹಾಕ್. ಇದೆ ಅಂದ್ ಸಂಬಂಧಗಳಿಗೆ ಗೌರವ ಕೊಡ್ತಿದ್ದ ವಿಚಾರ. ಇಂದ್ ಆಡಂಬರಂದ ಪ್ರದರ್ಶನ ಮಾಡ್ತ ಒಳ ಅಷ್ಟೆ. ಬೆಳಿಗೆ ಎದ್ದ್ ಅವ್ವ ಒಲೆಗೆ ಬೆಂಕಿ ಹೊತ್ತಿಸಿದಂಗೆ, ಮಕ್ಕ ಎದ್ದಂಗೆ ಕಣ್ಣ್‌ನ ಕೈಲಿ ಉಜ್ಜಿಕಂಡ್ ಬಂದ್ ಮಣೆ ಎಳ್ದ್ ಒಲೆ ಬುಡಲಿ ಕುರ್ತಿದ್ದೊ. ಆಗ ಮಕ್ಕ ಹೆಚ್ಚಿ ತನೆ. ನಂಗೆ ಮಣೆ ಕೊಡ್ದುಲೆ ಅವ್ವತ ಏಳ್ದಾಡ್ತಿದ್ದೋ. ಒಬ್ಬ ಮಣೆ ಇಸಿ ಕುದ್ದುರ್ಕನ ಇನ್ನೊಬ್ಬ ತಿಕದಡಿಂದ ಮಣೆ ಎಳ್ದರೆ, ಕುದ್ದಂವ ಹೊಣ್ಕಿ ಬೀಳ್ದು. ಉಳ್ದವುಕೆ ಖುಷಿ ತಂದರೆ, ಬಿದ್ದಂವ ಮರ್ಟ್‌ಕಂಡ್, ಪಾಪುರು ನಿನ್ನ ದೊಂಡೆ ಕಟ್ಟ ತೇಳ್ತಿತ್ತ್. ಹಂಗೆ ಮಣೆಲೆ ಕುದ್ದ್ ಸೌದೆ ಕೊಳ್ಳಿಂದ ಒಂದು ಕೆಂಡ ಎಳ್ದ್, ಒಲೆ ಮೇಲೆಂದ ಬಿಸ್ನೀರ್‌ನ ಕಂತಿಸಿಕಂಡ್ ಹಲ್ಲ್ ಉಜ್ಜುತಿದ್ದೊ. ಮತ್ತೆ ಪುನ ಅಲ್ಲೆ ಬಂದ್ ಕಾಫಿ ಕುಡ್ದು ಹೊರಗೆ ಹೋದು. ಹಿಂಗೆ ಒಬ್ಬ ಆದ ಮೇಲೆ ಒಬ್ಬರ ಪಂಕ್ತಿ ಮುಗಿತಿತ್ತ್. ಅವ್ವ ಮಣೆಲಿ ಕುದ್ದು ಮುಂದೆ ಮುಕ್ಕಾಲ್ ಮಡ್ಗಿ ಅದರ ಮೇಲೆ ಬಾಡ್ಸಿದ ಬಾಳಲೆ ಇಸಿ ರೊಟ್ಟಿ ತಟ್ಟುದು ಹೊರಗೆ ಕೇಳ್ತಿತ್ತ್. ಪೊಜ್ಜಿ ಕಡೆಕನ ಕಡಕಲ್ಲ್ ಬುಡಲಿ ಮಣೆ ಇಸಿ ಕುದ್ದ್ ಕಡ್ದರೆ ಗಡಗಡ ಸದ್ದ್. ಪೊಜ್ಜಿ ಪೊರ್ಮುಳ ಹೊರಗೆ ಓದಿಕಂಡ ಕುದ್ದ ಮಕ್ಕಳ ಮೂಗುಗೆ ಬಡೆತ್ತಿತ್ತ್ ಮತ್ತೆ ಎಲ್ಲಾ ಊಟಕ್ಕೆ ಸಾಲಾಗಿ ಕುದ್ದುರ್ದು ಮಣೆಲೆ.

ಚಾಮೆವ್ವ ಮಣೆಲೆ ಕುದ್ದು ಎಲೆ ಅಡಿಕೆ ಗುದ್ದದು. ಇನ್ನ್ ತರಕಾರಿ ಕೊಯ್ಯೊದ. ಬಂದ ಕಡ್ದ್‌ರೆ ಮಡಿಕೆ ಬಾಯಿಗೆ ಬಟ್ಟೆ ಕಟ್ಟಿ ಅದರ ಮೇಲೆ ಮಣೆನ ಇಸುದು. ಹಂಗೆನೆ ಚಟ್ಟಿ ಮುಚ್ಚಿ ಅದರ ಮೇಲೆ ಮಣೆನ ಬಾರ ಇಸುದು ಕೊತ್ತಿ ಮಗ್‌ಚಿ ಮಾಸದ, ಮೀನ್‌ನ ತುಂಡು ಹೊತ್ತದೆತಾ. ಅಪ್ಪ ಉಟಕ್ಕೆ ಕೂರ್ದು, ಹಂಗೆನೆ ಮಣೆ ಮೇಲೆ ಕುದ್ದ್ ಮುಕ್ಕಾಲ್‌ಲಿ ಕಂಚಿನ ಬಟ್ಲೆ ಇಸಿ ಉಂಡರೆ ಅದ್ ಎಷ್ಟ ಉಂಡರೆ ಅಪ್ಪಂಗೆ ಎದ. ಬೆಸೆಗೆಲಿ ಇಸಿದ ಬಾಳೆ ಹಣ್ಣ ಕೈಗೆ ಸಿಕ್ಕದಿದ್ದರೆ ಮಕ್ಕ ಮಣೆ ಮುಕ್ಕಾಲ್ ಇಸಿ ಅದರ

ಮೇಲೆ ಹತ್ತಿ ತೆಗೆತ್ತಿದ್ದೋ. ಮಣೆ ಮೇಲೆ ಇಸಿ  ಹಾಲ್‌ಗೆಂಡೆ ನೀರುಳಿ ಕೊಯ್ಯೊದು, ಕೆಸ ಸೋಸುದು, ಚರ್ಮೆ ಸೊಪ್ಪು ಅಚ್ಚ್ ಕಟ್ಟ್ ಮಾಡ್ದು. ಅಕ್ಕಿ ಒಂಚುದು ಹಿಂಗೆ ಒಂದಾ ಎರಡಾ ಕೆಲ್ಸ. ಮಣೆಲಿ ಕುದ್ದು ಹಂದಿ ಹೊಡ್ದರೆ,  ಕೋಳಿ ಕೊಂದರೆ ಮೂಳೆ ಕಡ್ದ್ ಕಡ್ದ್ ಮಣೆದ ಎರಡ್ ಕಡೆ ರೋಮ ಉದುರ್ದ ಕೊತ್ತಿದ್ ಕುತ್ತಿಗೆ ಇದ್ದಂಗೆ ಆದೆ. ಆದರೂ ಮಣೆನ ಬಿಸಾಕುಲೆ. ಅಂತ ಮಣೆ ಸಿಕ್ಕಿರೆ ಮಕ್ಕ ಕುತ್ತಿಗೆನಂಗೆ ಇರುವ ಅದಿಕೆ ಹಗ್ಗ ಕಟ್ಟಿ, ದನತ ಏಳ್ದ್ ಆಟ ಆಡ್ತಿದ್ದೋ. ಕೆಲವು ಸರ್ತಿ ಮಣೆಲೇ ಮನೆ ಒಳಗೆ ಹೊಡ್ದಾಟ ಆತಿತ್. ಅಪ್ಪ ನಮ್ಮ ಅವ್ವಂಗೆ ಮಣೆಲಿ ಹೊಡ್ದ ಸಂಗತಿ ಹಳೆ ಕಥೆ. ಒಂದೊಂದು ಸರ್ತಿ ಅಪ್ಪ ದುಡ್ದ್ ಕೊಟ್ಟಿತ್‌ಲೆತ ಅಪ್ಪಂಗೆ ಮಕ್ಕ ಮಣೆಲಿ ಎತ್ತಿ ಹೊಡ್ದ ಸಂಗತಿ ನಡ್ದ ನೆನಪು ಉಟ್ಟು.

ಮದುವೆ ಶಾಸ್ತ್ರಲಿ ಬಳ್ಸುವ ಹಸೆಮಣೆ, ಕಾಯಿ ಹೆರೆವ ಹೆರೆಮಣೆ, ಆಟಾಡಿಕೆ ಚೆನ್ನೆಮಣೆ; ನೆಲಸಮ ಮಾಡುವ ದಮಾಸ್ ಮಣೆ, ನೆಲಸಮ ಮಾಡಿಕೆ ಇನ್ನೊಂದು ಗಟ್ಟಿ ಮಣೆ, ತರಕಾರಿ ಕೊಯಕನ ಬಳ್ಸುವ ಮೆಟ್ಟ್‌ಕತ್ತಿ ಮಣೆ, ಅಡಿಕೆ ಚೊಲ್ಲುವ ಮಣೆ, ಅಡಿಕೆ ಮರಕ್ಕೆ ಹತ್ತುವ ಮಣೆ, ಶಾಲೆ ಮಕ್ಕಳಿಗೆ ಕೂರಿಕೆ ನಲಿಕಲಿ ಮಣೆ; ಅನ್ನಬಾಗ್‌ಕನ ಚಿಬ್ಬುಲು ಜಾರಿ ಹೋದೆತ ಅನ್ನದ ಮಡಿಕೆ ಮತ್ತೆ ಅಡಿಗೆರ ಮಧ್ಯ ಮಣೆನ ಮಡ್ಗ್ ತ್ತಿದ್ದೋ. ಬದ್‌ಕನೊಟ್ಟಿಗೆ ಹಾಸ್‌ಹೊಕ್ಕಾಗಿ ಬಂದ ಈ ಮಣೆ, ಅಜ್ಜಿ ಕಾಲ್ ನೀಂಡಿ ಕುದ್ದ್ ಕೂಸುನ ಮೀಸುದು, ವೀಳ್ಯ ಶಾಸ್ತ್ರಲಿ, ಹಸೆ ಬರೆಕನ, ಮದ್ರಂಗಿ ಇಸ್‌ಕನ, ಹಾಲ್ ತುಪ್ಪ ಕುಡ್ಸ್‌ಕನ, ಕಾರ್ಣೋರಿಗೆ ಇಸ್‌ಕನ, ತುಪ್ಪ ತಕಂಡ್ ಹೋಕನ, ತುಪ್ಪ ತಂದ್ ಇಸ್‌ಕನ, ಬಾಡೆಲಿ ಇರುವ ಗೋಡೆ ದೀಪ ಕೆಳಿಗೆ ಮಣೆ, ಮುಕ್ಕಾಲ್ ಇಸಿ ಅದರ್ಲಿ ಇಸುವೆ. ಹಬ್ಬಹರಿದಿನಲಿ, ಪೂಜೆ ಪುರಸ್ಕಾರಲಿ, ಸಾವುಲಿ, ಶುದ್ದಲಿ, ತಿಥಿಲಿ, ಸದಾ ನಮ್ಮ ಒಟ್ಟಿಗೆ ಇರುವ ಮಣೆ, ಮುಕ್ಕಾಲ್‌ಂದ ಕೆಲವು ಸಂದರ್ಭಲಿ ಬಳ್ಸದು ಬುಟ್ಟರೆ, ಈಗ ಅಟ್ಟ ಹತ್ತಿ ಕುದ್ದುಟ್ಟು. ನೋಡೋಕುತಾದರೆ ಫೋಟೋ ತೆಗ್ದ್, ವಿಡಿಯೋ ಮಾಡಿ ಕಳ್ಸವೆ, ಇಂದ್ ನಾವು ಬಹಳಷ್ಟು ಎತ್ತರ ಕುದ್ದರೂ ಕಡೆಗೆ ನಮ್ಮ ಬದ್‌ಕ್ ಮಣ್ಣ್‌ನ ಅಡಿಲೆ ಕುದ್ದದೆ. ಅದರ್‌ಂದ ನೋಕ್ಮಣೆ ಯಾಕ್ಮಣೆ ಅಗದೆ ಹಾಕ್ಮಣೆ ಆಗಿ ಬದುಕೋಮ.

---

**ತೆಕ್ಕಡೆ ಬಿ. ಕುಮಾರಸ್ವಾಮಿ**
ಮುತ್ತಾರ್ಮುಡಿ
ಮೊ:ಸಂ:9483234335.

## 2021ರ ಜುಲೈಂದ ಸೆಪ್ಟಂಬರ್ ತಿಂಗ್ಳ ಅಕ್‌ರಿವರೆಗೆ
## ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತು ಸಾಹಿತ್ಯ ಅಕಾಡೆಮಿ ನಡ್ಸಿದ ಕಾರ್ಯಕ್ರಮಗ

1. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ವತಿಂದ ಪ್ರಸಿದ್ಧ ಚಿತ್ರ ಕಲಾವಿದ, ರಂಗ ನಿರ್ದೇಶಕ ಮೋಹನ ಸೋನರ ಸಾಕ್ಷ್ಯ ಚಿತ್ರ ಬಿಡುಗಡೆ ಜಂಭರ ಸುಳ್ಯದ ಕೆ.ವಿ.ಜಿ ಆಯುರ್ವೇದಿಕ್ ಮೆಡಿಕಲ್ ಕಾಲೇಜ್ ಆಡಿಟೋರಿಯಂಲಿ ಜುಲೈ 31ರಂದ್ ನಡ್‌ತ್. ಸುಳ್ಯದ ಅಕಾಡೆಮಿ ಆಫ್ ಲಿಬರಲ್ ಎಜ್ಯುಕೇಶನ್‌ನ ಅಧ್ಯಕ್ಷರ್ ಡಾ.ಕೆ.ವಿ. ಚಿದಾನಂದವು ಸಾಕ್ಷ್ಯ ಚಿತ್ರನ ಬಿಡುಗಡೆ ಮಾಡ್ದೊ. ಕರ್ನಾಟಕ ಜಾನಪದ ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಡಾ.ಕೆ.ಚಿನ್ನಪ್ಪ ಗೌಡವು ಸಾಕ್ಷ್ಯ ಚಿತ್ರದ ಬಗ್ಗೆ ಮಾತಾಡ್‌ದೊ. ನೆಂಟ್ರಾಗಿ ಕವಿ ಸುಬ್ರಾಯ ಚೊಕ್ಕಾಡಿ ಮತ್ತೆ ಸಾಕ್ಸ್ಯ ಚಿತ್ರದ ನಿರ್ದೇಶಕರ್ ಜೀವನ್ ರಾಂ ಸುಳ್ಯ ಇವು ಜಂಭರಲಿ ಇದ್ದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವು ಸಾಕ್ಸ್ಯ ಚಿತ್ರ ಬಿಡ್‌ಗಡೆ ಜಂಭರದ ಅಧ್ಯಕ್ಷತೆನ ವಯಿಸಿದೊ. ಜಂಭರಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಸದಸ್ಯರ್ ಉಪಸ್ಥಿತರಿದ್ದೊ.

2. ಭಾರತೀಯ ವಿದ್ಯಾಭವನ, ಮಡಿಕೇರಿಲಿ ಅಗಸ್ಟ್ 4ರಂದ್ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ವತಿಂದ ಪ್ರಸಿದ್ಧ ಚಿತ್ರ ಕಲಾವಿದ ರಂಗ ನಿರ್ದೇಶಕ ಮೋಹನ ಸೋನರ ಸಾಕ್ಷ್ಯ ಚಿತ್ರ ಪ್ರದರ್ಶನ ನಡ್‌ತ್. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವು ಜಂಭರದ ಅಧ್ಯಕ್ಷತೆನ ವಯಿಸಿದೊ. ಮೈಸೂರು ರಂಗಾಯಣದ ನಿರ್ದೇಶಕರ್ ಅಡ್ಡಂಡ ಕಾರ್ಯಪ್ಪ, ಕರ್ನಾಟಕ ಜಾನಪದ ಪರಿಷತ್, ಕೊಡಗು ಘಟಕದ ಅಧ್ಯಕ್ಷರ್ ಬಿ.ಜಿ.ಅನಂತಶಯನವು, ಕೊಡಗು ಗೌಡ ಸಮಾಜ, ಮಡಿಕೇರಿ ಇದರ ಅಧ್ಯಕ್ಷರ್ ಆದ ಪೇರಿಯನ ಜಯಾನಂದ, ಸಾಕ್ಷ್ಯ ಚಿತ್ರದ ನಿರ್ದೇಶಕರ್ ಆದ ಜೀವನ್ ರಾಂ ಸುಳ್ಯ ನೆಂಟ್ರಾಗಿ ಜಂಭರಲಿ ಇದ್ದೊ. ಜಂಭರಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ರಿಜಿಸ್ಟ್ರಾರ್ ಚಿನ್ನಸ್ವಾಮಿ ಮತ್ತೆ ಎಲ್ಲಾ ಸದಸ್ಯರ್ ಉಪಸ್ಥಿತರಿದ್ದೊ.

3. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ವತಿಂದ ಸುಳ್ಯ ತಾಲೂಕು ಅಲೆಟ್ಟಿ ಗ್ರಾಮದ ಬಾಬು ಮತ್ತೆ ತಂಡಕ್ಕೆ ಸನ್ಮಾನ್ಯ ಸಚಿವರ್ ಎಸ್.ಅಂಗಾರವು, ಅಕಾಡೆಮಿನ ಅಧ್ಯಕ್ಷರ್ ಮತ್ತೆ ಸದಸ್ಯರ ಸೇರಿ ಅಗಸ್ಟ್ 7ರಂದ್ ವಾದ್ಯ ಪರಿಕರಗಳನ್ನ ನೀಡ್ದೊ.

4. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಗೌಡ ಸಮಾಜ, ಮೂರ್ನಾಡು ಇದರ ಕೂಡ್‌ಕಟ್ಟ್‌ಲಿ ಅಗಸ್ಟ್ 16ರ್‌ಂದ 19ರ್‌ವರೆಗೆ ಅರೆಭಾಷೆ ಸಂಸ್ಕೃತಿ ಶಿಬಿರ ಮೂರ್ನಾಡು ಗೌಡ ಸಮಾಜದ ಸಭಾಂಗಣಲಿ ನಡ್‌ತ್. ಶಿಬಿರದ ಉದ್ಘಾಟನೆನ ಮೂರ್ನಾಡು ಗೌಡ ಸಮಾಜದ ಅಧ್ಯಕ್ಷರ್ ಪಾಣತ್ತಲೆ ಟಿ. ಹರೀಶ್‌ವು ಮಾಡ್ದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವು ಉದ್ಘಾಟನಾ ಜಂಭರದ ಅಧ್ಯಕ್ಷತೆನ ವಯಿಸಿದೊ. ಉದ್ಘಾಟನಾ ಜಂಭರಲಿ

ಪ್ರೊ ದಂಬೆಕೋಡಿ ಸುಶೀಲ ಸುಬ್ರಮಣಿ, ಶ್ರೀಮತಿ ಪಾರೆಮಜಲು ರೀತಾ ಸುದರ್ಶನ್, ಶ್ರೀಮತಿ ಬೈಲೋಳಿ ಸುಂದರಿ ಸುಬ್ಬಯ್ಯ ಮತ್ತೆ ಶ್ರೀಮತಿ ಮಿತ್ತೂರು ದಿವ್ಯ ಕಿರಣ್ ಅವು ನೆಂಟ್ರಾಗಿ ಬಂದಿದೊ. ಶಿಬಿರದ ಸಂಪನ್ಮೂಲ ವ್ಯಕ್ತಿಗಾಗಿ ಶ್ರೀಮತಿ ತಳೂರು ಯಶೋಧ ಸೋಮಣ್ಣ, ಮೇರ್‌ಕಜೆ ಉಮೇಶ್ ನಾಣಯ್ಯ, ಕಲ್ಲುಮುಟ್ಲು ಗಣೇಶ ಪೂವಯ್ಯವು ಕೆಲ್ಸ ಮಾಡ್ದೊ. ಅಗಸ್ಟ್ 19ರಂದ್ ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಜಂಭರ ಮೂರ್ನಾಡು ಗೌಡ ಸಮಾಜದ ಅಧ್ಯಕ್ಷರ್ ಪಾಣತ್ತಲೆ ಟಿ. ಹರೀಶ್‌ರ ಅವ್ರ ಅಧ್ಯಕ್ಷತೆಲಿ ನಡ್‌ತ್. ಸಮಾರೋಪ ಜಂಭರಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಮಾಜಿ ಸದಸ್ಯರ್ ಶ್ರೀಮತಿ ಕಡ್ಲೇರ ತುಳಸಿ ಮೋಹನ್ ಮತ್ತೆ ಮಡಿಕೇರಿ ಅಕಾಶವಾಣಿ ಉದ್ಘೋಷಕರ್ ವಿನೋದ್ ಮೂಡಗದ್ದೆವು ನೆಂಟ್ರಾಗಿ ಬಂದಿದೊ. ಜಂಭರಲಿ ಶಿಬಿರದ ಸದಸ್ಯ ಸಂಯೋಜಕರ್ ಶ್ರೀಮತಿ ಪ್ರೇಮ ರಾಘವಯ್ಯ ಚೊಕ್ಕಾಡಿ ಮತ್ತೆ ಅಕಾಡೆಮಿನ ಎಲ್ಲಾ ಸದಸ್ಯರ್ ಉಪಸ್ಥಿತರಿದ್ದೊ.

5. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ವತಿಂದ ಏನೆಕಲ್ಲ್‌ಲಿ ಅಕಾಡೆಮಿನ ಅಧ್ಯಕ್ಷರ್ ಮತ್ತೆ ಸದಸ್ಯರ್ ಅಗಸ್ಟ್ 20ರಂದ್ ವಿಶಿಷ್ಟ ಘಟಕ ಯೋಜನೆ ಅಡಿಲಿ ವಾದ್ಯ ಪರಿಕರಗಳನ್ನ ಕಡಬ ತಾಲ್ಲೂಕುನ ಏನೆಕಲ್ಲ್ ಪ್ರವೀಣ್ ಅವುಕ್ಕೆ ನೀಡ್ದೊ.

6. ಕೊಡಗು ಗೌಡ ಸಮಾಜ, ಮಡಿಕೇರಿಲಿ ಅಗಸ್ಟ್ 27ರಂದ್ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ದಶ ವರ್ಷ ಸಂಭ್ರಮದ ಉದ್ಘಾಟನಾ ಜಂಭರ ನಡ್‌ತ್. ಕರ್ನಾಟಕ ಸರ್ಕಾರದ ಬಂದರು ಮತ್ತು ಮೀನುಗಾರಿಕೆ ಇಲಾಖೆನ ಸಚಿವರ್ ಆದ ಎಸ್.ಅಂಗಾರವು ದಶವರ್ಷ ಸಂಭ್ರಮದ ಉದ್ಘಾಟನೆ ಮಾಡಿ ಆಶಯ ಮಾತ್‌ಗಳ್‌ನ್ನ ಆಡ್ದೊ. ಕರ್ನಾಟಕ ರಾಜ್ಯ ಸರ್ಕಾರಿ ಜಮೀನು ಸಂರಕ್ಷಣಾ ಸಮಿತಿನ ಅಧ್ಯಕ್ಷರ್, ವಿರಾಜಪೇಟೆ ವಿಧಾನ ಸಭಾ ಕ್ಷೇತ್ರದ ಶಾಸಕರ್ ಆದ ಕೊಂಬಾರನ ಜಿ ಬೋಪಯ್ಯ, ಮಡಿಕೇರಿ ವಿಧಾನ ಸಭಾ ಕ್ಷೇತ್ರದ ಶಾಸಕರ್ ಆದ ಅಪ್ಪಚ್ಚು ರಂಜನ್, ವಿಧಾನ ಪರಿಷತ್ ಸದಸ್ಯರ್ ಆದ ಎಂ.ಪಿ.ಸುನೀಲ್ ಸುಬ್ರಮಣಿ ಮತ್ತೆ ಶ್ರೀಮತಿ ಶಾಂತೆಯಂಡ ವೀಣಾ ಅಚ್ಚಯ್ಯ, ಕರ್ನಾಟಕ ಪಶ್ಚಿಮಘಟ್ಟ ಸಂರಕ್ಷಣಾ ಕಾರ್ಯಪಡೆನ ಅಧ್ಯಕ್ಷರ್ ಶಾಂತೆಯಂಡ ರವಿಕುಶಾಲಪ್ಪ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಮಾಜಿ ಅಧ್ಯಕ್ಷರ್ ಕೊಲ್ಯದ ಗಿರೀಶ್, ಪಿ.ಸಿ.ಜಯರಾಮ, ಕೊಡಗು ಗೌಡ ಸಮಾಜಗಳ ಒಕ್ಕೂಟ್ ಅಧ್ಯಕ್ಷರ್ ಸೂರ್ತಲೆ ಸೋಮಣ್ಣ, ಕೊಡಗು ಗೌಡ ಸಮಾಜ, ಮಡಿಕೇರಿ ಇದರ ಅಧ್ಯಕ್ಷರ್ ಪೇರಿಯನ ಜಯಾನಂದ, ಭಾರತದ ಮಹಿಳಾ ಹಾಕಿ ತಂಡದ ಸಹಾಯಕ ಕೋಚ್ ಹೊನ್ನಂಪಾಡಿ ಅಂಕಿತಾ ಸುರೇಶ್‌ವು ನೆಂಟ್ರಾಗಿ ಭಾಗವಯಿಸಿದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವು ಉದ್ಘಾಟನಾ ಜಂಭರದ ಅಧ್ಯಕ್ಷತೆನ ವಯಿಸಿದೊ. ಜಂಭರಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ರಿಜಿಸ್ಟ್ರಾರ್ ಚಿನ್ನಸ್ವಾಮಿ ಮತ್ತೆ ಎಲ್ಲಾ ಸದಸ್ಯರ್ ಉಪಸ್ಥಿತರಿದ್ದೊ.

7. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಕೊಡಗು ಗೌಡ

ಸಮಾಜ ಪಿರಿಯಾಪಟ್ಟಣ ಇದರ ಕೂಡ್‌ಕಟ್ಟ್‌ಲಿ ಅರೆಭಾಷೆ ಸಂಸ್ಕೃತಿ ಶಿಬಿರ ಸೆಪ್ಟಂಬರ್ 6ರ್‌ಂದ 9ರ್ವರೆಗೆ ಕೊಡಗು ಗೌಡ ಸಮಾಜ ಪಿರಿಯಾಪಟ್ಟಣಲಿ ನಡ್‌ತ್. ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನೆನ ಪಿರಿಯಾಪಟ್ಟಣದ ಅರೆಭಾಷೆ ಕೊಡಗು ಗೌಡ ಸಮಾಜದ ಅಧ್ಯಕ್ಷರ್ ಪೊಕ್ಕಳಂಡ ವಸಂತ್ ಕುಮಾರ್‌ವು ಮಾಡ್ದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವು ಉದ್ಘಾಟನಾ ಜಂಭರದ ಅಧ್ಯಕ್ಷತೆನ ವಯಿಸಿದೊ. ಉದ್ಘಾಟನಾ ಜಂಭರಲಿ ಪಿರಿಯಾಪಟ್ಟಣದ ಅರೆಭಾಷೆ ಕೊಡಗು ಗೌಡ ಸಮಾಜದ ಮಾಜಿ ಅಧ್ಯಕ್ಷರ್‌ಗ ತೋಟಂಬೈಲು ಪ್ರಭಾಕರ ಮತ್ತೆ ಮೇಡತ್ತನ ಶಿವಾಜಿ, ಮಾಜಿ ಜಿಲ್ಲಾ ಪಂಚಾಯಿತಿ ಸದಸ್ಯರ್ ಶ್ರೀಮತಿ ಬಳ್ಜೆಂಟಿ ಧನ್ಯವತಿ ಅವು ನೆಂಟ್ರಾಗಿ ಇದ್ದೊ. ಶಿಬಿರದ ಸಂಪನ್ಮೂಲ ವ್ಯಕ್ತಿಗಾಗಿ ಶ್ರೀಮತಿ ತಳೂರು ಯಶೋಧ ಸೋಮಣ್ಣ, ಕುಲ್ಲಚೆಟ್ಟಿ ಪೂವಯ್ಯ ಮತ್ತೆ ಶ್ರೀಮತಿ ಕೋಲ್ಪೆ ದೇವಕ್ಕಿಯವು ಕೆಲ್ಸ ಮಾಡ್ದೊ. ಸೆಪ್ಟಂಬರ್ 9ರಂದ್ ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಜಂಭರ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವರ ಅಧ್ಯಕ್ಷತೆಲಿ ನಡ್‌ತ್. ಪಿರಿಯಾಪಟ್ಟಣದ ಅರೆಭಾಷೆ ಕೊಡಗು ಗೌಡ ಸಮಾಜದ ಮಾಜಿ ಉಪಾಧ್ಯಕ್ಷರ್ ಕಾಳೇರಮ್ಮನ ಗಣಪತಿ ಮತ್ತೆ ನಿವೃತ್ತ ಉಪನ್ಯಾಸಕರ್ ಕುಯ್ಯಮುಡಿ ಅಶ್ವಿನಿಕುಮಾರ್‌ವು ನೆಂಟ್ರಾಗಿ ಬಂದಿದೊ. ಜಂಭರಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಸದಸ್ಯರ್ ಉಪಸ್ಥಿತರಿದ್ದೊ.

8. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಕುಕ್ಕೆ ಶ್ರೀ ಸುಬ್ರಹ್ಮಣ್ಯೇಶ್ವರ ಮಹಾವಿದ್ಯಾಲಯ ಸುಬ್ರಹ್ಮಣ್ಯ, ಐ.ಕ್ಯೂ.ಎ.ಸಿ ಘಟಕ, ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಸಂಘ, ಕಡಬ ಇದರ ಕೂಡ್‌ಕಟ್ಟ್‌ಲಿ ಅರೆಭಾಷೆ ಸಂಸ್ಕೃತಿ ಶಿಬಿರ ಸೆಪ್ಟಂಬರ್ 7ರ್‌ಂದ 9ರ್ವರೆಗೆ ಕೆ.ಎಸ್.ಎಸ್ ಕಾಲೇಜ್, ಸುಬ್ರಹ್ಮಣ್ಯದ ಸಭಾಂಗಣಲಿ ನಡ್‌ತ್. ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನಾ ಜಂಭರನ ಸೆಪ್ಟಂಬರ್ 7ರಂದ್ ಕುಕ್ಕೆಶ್ರೀ ಸುಬ್ರಹ್ಮಣ್ಯೇಶ್ವರ ದೇವಸ್ಥಾನದ ವ್ಯವಸ್ಥಾಪನ ಸಮಿತಿನ ಅಧ್ಯಕ್ಷರ್ ಮೋಹನ್‌ರಾಂ ಸುಳ್ಳಿ ಅವು ಮಾಡ್ದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವು ಉದ್ಘಾಟನಾ ಜಂಭರದ ಅಧ್ಯಕ್ಷತೆನ ವಯಿಸಿದೊ. ಕೆ.ಎಸ್.ಎಸ್ ಕಾಲೇಜ್‌ನ ಪ್ರಾಂಶುಪಾಲರ್ ಡಾ.ಗೋವಿಂದ.ಎನ್.ಎಸ್ ಮತ್ತೆ ನಿವೃತ್ತ ದೈಹಿಕ ಶಿಕ್ಷಣ ನಿರ್ದೇಶಕರ್ ತುಕಾರಾಮ ಏನೆಕಲ್ಲು ಅವು ನೆಂಟ್ರ್‌ಗ ಆಗಿ ಬಂಭರಲಿ ಇದ್ದೊ. ಜಂಭರಲಿ ಶಿಬಿರದ ಸದಸ್ಯ ಸಂಯೋಜಕರ್ ಜಯಪ್ರಕಾಶ್ ಮೋಂಟಡ್ಕ, ಬಿಳಿನೆಲೆ ಇವು ಉಪಸ್ಥಿತ ಇದ್ದೊ. ಶ್ರೀ ಉಮೇಶ್ ಮಕ್ಕಿ ಮತ್ತೆ ಶ್ರೀಮತಿ ಪವಿತ್ರ ಹೇಮಂತ್ ದೊಡ್ಡಮನೆ ಇವು ಶಿಬಿರದ ಸಂಪನ್ಮೂಲ ವ್ಯಕ್ತಿಗಾಗಿದ್ದೊ. ಜಂಭರಲಿ ಕೆ.ಎಸ್.ಎಸ್ ಕಾಲೇಜ್‌ನ ಐ.ಕ್ಯೂ.ಎ.ಸಿ ಸಂಯೋಜಕರ್ ಡಾ.ಪ್ರಸಾದ್.ಎನ್ ಮತ್ತೆ ಕೆ.ಎಸ್.ಎಸ್ ಕಾಲೇಜ್‌ನ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಸಂಘದ ಸಂಚಾಲಕರ್ ಶ್ರೀಮತಿ ಸುಮಿತ್ರವು ಇದ್ದೊ. ಅರೆಭಾಷೆ ಸಂಸ್ಕೃತಿ ಶಿಬಿರದ ಸಮರೋಪ ಜಂಭರ ಸೆಪ್ಟಂಬರ್ 9ರಂದ್ ಕೆ.ಎಸ್.ಎಸ್.ಕಾಲೇಜ್‌ನ ಪ್ರಾಂಶುಪಾಲರ್ ಡಾ.ಗೋವಿಂದ ಎನ್. ಎಸ್ ಅವ್ರ ಅಧ್ಯಕ್ಷತೆಲಿ ನಡ್‌ತ್. ಸಮಾರೋಪ ಜಂಭರಲಿ ಕುಕ್ಕೆಶ್ರೀ ಸುಬ್ರಹ್ಮಣ್ಯೇಶ್ವರ

ದೇವಸ್ಥಾನದ ವ್ಯವಸ್ಥಾಪನ ಸಮಿತಿನ ಸದಸ್ಯರ್ ಶ್ರೀಮತಿ ಶೋಭಾ ಗಿರಿಧರವು ಇದ್ದೊ. ಸಮರೋಪ ಜಂಭರಲಿ ಶಿಬಿರದ ಸದಸ್ಯ ಸಂಯೋಜಕರ್ ಜಯಪ್ರಕಾಶ್ ಮೋಂಟಡ್ಕ, ಬಿಳಿನೆಲೆ, ಅಕಾಡೆಮಿ ಸದಸ್ಯ ಪುರುಷೋತ್ತಮ ಕಿರ್ಲಾಯ ಉಪಸ್ಥಿತರಿದ್ದೊ.

9. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಭಾಗಮಂಡಲ ನಾಡು ಗೌಡ ಯುವ ಒಕ್ಕೂಟ ಇದರ ಕೂಡ್‌ಕಟ್ಟ್‌ಲಿ ಸೆಪ್ಟಂಬರ್ 10ರ್‌ಂದ 12ರ್ರವರೆಗೆ ಅರೆಭಾಷೆ ಸಂಸ್ಕೃತಿ ಭಾಗಮಂಡಲದ ಕೆ.ವಿ.ಜಿ.ಐ.ಟಿ.ಐ ಕಾಲೇಜ್ ಸಭಾಂಗಣಲಿ ನಡ್‌ತ್. ಭಾಗಮಂಡಲ ನಾಡು ಗೌಡ ಯುವ ಒಕ್ಕೂಟದ ಅಧ್ಯಕ್ಷರ್ ಕಿಶೋರ್ ಕುದುಕುಳಿ ಅವು ಸೆಪ್ಟಂಬರ್ 10ರಂದ್ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನೆ ಮಾಡ್ದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವು ಉದ್ಘಾಟನಾ ಜಂಭರದ ಅಧ್ಯಕ್ಷತೆನ ವಯಿಸಿದೊ. ನೆಂಟ್ರಾಗಿ ಶ್ರೀ ಕಾವೇರಿ ಪದವಿ ಪೂರ್ವ ಕಾಲೇಜ್, ಭಾಗಮಂಡಲ ಇದರ ಪ್ರಾಂಶುಪಲರ್ ಕುಂದಲ್ಪಾಡಿ ದಿವಾಕರ, ಕೊಡಗು ಗೌಡ ವಿದ್ಯಾ ಸಂಘದ ನಿರ್ದೇಶಕರ್ ದೇವಂಗೋಡಿ ಹರ್ಷ, ಕುಲ್ಲಚೆಟ್ಟಿ ಕಾಶಿ ಮತ್ತೆ ತಣ್ಣಿಮಾನಿ ಗ್ರಾಮ ಪಂಚಾಯತ್ ಸದಸ್ಯರ್ ದಂಡಿನ ಜಯಂತ ಅವು ಭಾಗವಯಿಸಿದೊ. ಆನೇರ ಲಾಲು, ಶ್ರೀಮತಿ ತಳೂರು ಯಶೋಧ ಸೋಮಣ್ಣ, ಕಲ್ಲುಮುಟ್ಲು ಗಣೇಶ ಮತ್ತೆ ಮತ್ತಾರಿ ರಾಜು ಅವು ಶಿಬಿರದ ಸಂಪನ್ಮೂಲ ವ್ಯಕ್ತಿಗ ಆಗಿ ಕೆಲ್ಸ ಮಾಡ್ದೊ. ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಜಂಭರ ಭಾಗಮಂಡಲ ನಾಡು ಗೌಡ ಯುವ ಒಕ್ಕೂಟದ ಅಧ್ಯಕ್ಷರ್ ಕಿಶೋರ್ ಕುದುಕುಳಿ ಅವ್ರ ಅಧ್ಯಕ್ಷತೆಲಿ ಸೆಪ್ಟಂಬರ್ 12ರಂದ ನಡ್‌ತ್. ಸಮಾರೋಪ ಜಂಭರಲಿ ಕೊಡಗು ಗೌಡ ವಿದ್ಯಾ ಸಂಘದ ನಿರ್ದೇಶಕರ್ ಶ್ರೀಮತಿ ಕೆದಂಬಾಡಿ ಕಾಂಚನ ಮತ್ತೆ ಶ್ರೀ ಕಾವೇರಿ ವಿದ್ಯಾ ಸಂಘದ ಮಾಜಿ ಅಧ್ಯಕ್ಷರ್ ಪಾಣತ್ತಲೆ ವಿಶ್ವನಾಥವು ನೆಂಟ್ರಾಗಿ ಇದ್ದೊ. ಶಿಬಿರದ ಸದಸ್ಯ ಸಂಯೋಜಕರ್ ಡಾ ದಯಾನಂದ ಕೂಡಕಂಡಿ ಮತ್ತೆ ಅಕಾಡೆಮಿನ ಸದಸ್ಯರ ಜಂಭರಲಿ ಉಪಸ್ಥಿತ ಇದ್ದೊ.

10. ಕನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಏನೆಕಲ್ಲ್ ಗ್ರಾಮದ ಅರೆಭಾಷೆ ಬಾಂಧವರ್ ಇದರ ಕೂಡ್‌ಕಟ್ಟ್‌ಲಿ ಸೆಪ್ಟಂಬರ್ 11ರಂದ್ 13ರವ್ರಗೆ ಅರೆಭಾಷೆ ಸಂಸ್ಕೃತಿ ಶಿಬಿರನ ಏನೆಕಲ್ಲ್ ಪ್ರಾಥಮಿಕ ಕೃಷಿ ಸಹಕಾರಿ ಸಂಘದ ಸಭಾಂಗಣಲಿ ಅಯೋಜಿಸಿದೊ. ಶಿಬಿರದ ಉದ್ಘಾಟನೆನ ಮಾಗಣೆ ಗೌಡ್ರು, ಉದಯ್ ಕುಮಾರ್ ಬಾನಡ್ಕವು ನಡ್ಸಿದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವು ಉದ್ಘಾಟನಾ ಜಂಭರದ ಅಧ್ಯಕ್ಷತೆನ ವಯಿಸಿದೊ. ಏನೆಕಲ್ಲ್ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಅಧ್ಯಕ್ಷರ್ ಭವಾನಿಶಂಕರ ಪೂಂಬಾಡಿ, ಶ್ರೀ ಬಸವೇಶ್ವ ದೇವಸ್ಥಾನದ ವ್ಯವಸ್ಥಾಪನಾ ಸಮಿತಿಯ ಅಧ್ಯಕ್ಷರ್ ಗಿರಿಧರ ಸ್ಕಂದ, ಏನೆಕಲ್ಲ್ ಗ್ರಾಮ ಪಂಚಾಯತ್ ಸದಸ್ಯರ್ ಮೋಹನ ಕೋಟಿ ಗೌಡನ ಮನೆ ಮತ್ತೆ ಪರಮಲೆ ಏನೆಕಲ್ಲ್ ಗ್ರಾಮ ಪಂಚಾಯತ ಸದಸ್ಯರ್ ಶ್ರೀಮತಿ ಜಯಂತಿ ವೆಂಕಟೇಶ್ ಅವು ನೆಂಟ್ರಾಗಿ ಭಾಗವಯಿಸಿದೊ. ಸಮಾರೋಪ ಜಂಭರ ಸೆಪ್ಟಂಬರ್ 13ರಂದ್ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವ್ರ ಅಧ್ಯಕ್ಷತೆಲಿ ನಡ್‌ತ್. ಕರ್ನಾಟಕ ಅರೆಭಾಷೆ

ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಮಾಜಿ ಸದಸ್ಯರ್ ಕಾರ್ಯಪ್ಪ ಗೌಡ.ಪಿ.ಎಸ್, ಶ್ರೀ ಶಂಖಪಾಲ ಸುಬ್ರಹ್ಮಣ್ಯ ದೇವಸ್ಥಾನದ ವ್ಯವಸ್ಥಾಪನಾ ಸಮಿತಿನ ಅಧ್ಯಕ್ಷರ್ ನಾಗೇಶ್ ನೆಕ್ರಾಜೆ, ಸುಬ್ರಹ್ಮಣ್ಯ ಗ್ರಾಮ ಪಂಚಾಯತ್ ಸದಸ್ಯರ್ ಶ್ರೀಮತಿ ಭವ್ಯ ಕುಮಾರಿ ಜೇನುಕೋಡಿ ಅವು ನೆಂಟ್ರಾಗಿ ಬಂದಿದೊ. ಜಂಭರಲಿ ಶಿಬಿರದ ಸದಸ್ಯ ಸಂಚಾಲಕರ್ ಜಯಪ್ರಕಾಶ್ ಮೋಂಟಡ್ಕ ಬಿಳಿನೆಲೆ ಮತ್ತೆ ಅಕಾಡೆಮಿನ ಸದಸ್ಯರ್ ಉಪಸ್ಥಿತಿ ಇದ್ದೊ.

11. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಕಾಡೆಮಿನ ಸದಸ್ಯರಿಗೆ ಶಿವಮೊಗ್ಗದ ತೀರ್ಥಹಳ್ಳಿನ ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನಲಿ ಸೆಪ್ಟಂಬರ್ 19 ಮತ್ತೆ 20ರಂದ್ ಅಕಾಡೆಮಿನ ಸದಸ್ಯರಿಗೆ ತರಬೇತಿ ಶಿಬಿರ ಮತ್ತೆ ಕವಿ ಮನೆ ಅಧ್ಯಯನ ಪ್ರವಾಸನ ಅಯೋಜಿಸಿದೊ. ತರಬೇತಿ ಶಿಬಿರಲಿ ಪ್ರೊ ವಸಂತ್ ಕುಮಾರ್ ಮತ್ತೆ ವಾದಿರಾಜವು ಸಂಪನ್ಮೂಲ ವ್ಯಕ್ತಿಗಾಗಿ ಬಂದಿದೊ. ಶಿಬಿರಲಿ ಅಕಾಡೆಮಿನ ಅಧ್ಯಕ್ಷರ ಮತ್ತೆ ಸದಸ್ಯರ್‌ಗ ಭಾಗವಯಿಸಿದೊ.

12. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಅರೆಭಾಷೆ ಗೌಡ ಸಮಾಜ, ಆಲೂರು ಸಿದ್ದಾಪುರ ಇದರ ಕೂಡ್‌ಕಟ್ಟ್‌ಲಿ ಸೆಪ್ಟಂಬರ್ 20ರ್‌ಂದ 23ರ್ರವರೆಗೆ ಅರೆಭಾಷೆ ಸಂಸ್ಕೃತಿ ಶಿಬಿರ ಸಂಗಯ್ಯನಪುರದ ಅರೆಭಾಷೆ ಗೌಡ ಸಮಾಜ ಸಭಾಂಗಣಲಿ ನಡ್‌ತ್. ಬಾಗಲೂರು ಸರ್ಕಾರಿ ಪದವಿ ಪೂರ್ವ ಕಾಲೇಜ್‌ನ ಪ್ರಾಂಶುಪಾಲರ್ ನಂಗಾರು ನಿಂಗರಾಜುವು ಸೆಪ್ಟಂಬರ್ 20ರಂದ್ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನೆನ ಮಾಡ್ದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವು ಉದ್ಘಾಟನಾ ಜಂಭರದ ಅಧ್ಯಕ್ಷತೆನ ವಯಿಸಿದೊ. ಉದ್ಘಾಟನಾ ಜಂಭರಲಿ ಗೋಣಿಮಾರೂರುನ ಮಾಜಿ ತಾಲೂಕು ಪಂಚಾಯತ್ ಸದಸ್ಯರ್ ಶ್ರೀಮತಿ ಭಟ್ಯನ ಸವಿತ ಈರಪ್ಪ, ಪತ್ರಕರ್ತರ್ ಆದ ಚೆರಿಯಮನೆ ಸುರೇಶ್ ಮತ್ತೆ ಅಂಚೆ ಇಲಾಖೆನ ನಿವೃತ್ತ ನೌಕರ ಕಡ್ಯದ ಮಾಚಯ್ಯವು ನೆಂಟ್ರಾಗಿ ಬಂದಿದೊ. ಶಿಬಿರದ ಸಂಪನ್ಮೂಲ ವ್ಯಕ್ತಿಗಾಗಿ ಅತ್ಯಾಡಿ ಪೂವಯ್ಯ, ಕಡ್ಯದ ಶ್ಯಾಮಲ ತಾರಣಯ್ಯ, ಎಡಿಕೇರಿ ಜಯರಾಮ್ ಮತ್ತೆ ಪರ್ಲಕೋಟಿ ಭವಾನಿ ತಮ್ಮಯ್ಯವು ಕೆಲ್ಸ ಮಾಡ್ದೊ. ಅರೆಭಾಷೆ ಸಂಸ್ಕೃತಿ ಶಿಬಿರದ ಸಮಾರೋಪ ಜಂಭರ ಸೆಪ್ಟಂಬರ್ 23ರಂದ್ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವ್ರ ಅಧ್ಯಕ್ಷತೆಲಿ ನಡ್‌ತ್. ಸಮಾರೋಪ ಜಂಭರಲಿ ಆಲೂರು ಗೌಡ ಸಮಾಜದ ಅಧ್ಯಕ್ಷರ್ ದೇವಾಯಿರ ಗಿರೀಶ್, ಅರಕಲಗೂಡು ಸರ್ಕಾರಿ ಪದವಿ ಪೂರ್ವ ಕಾಲೇಜ್‌ನ ಪ್ರಾಂಶುಪಾಲರ್ ಆದ ಹುಲಿಮನೆ ಮಾದಪ್ಪ, ಡಿ.ಸಿ.ಸಿ ಬ್ಯಾಂಕ್‌ನ ನಿವೃತ್ತ ವ್ಯವಸ್ಥಾಪಕರ್ ದಂಡಿನ ಉತ್ತಯ್ಯ, ಆಲೂರು ಗ್ರಾಮ ಪಂಚಾಯತ್ ಸದಸ್ಯರ್ ಪರ್ಲಕೋಟಿ ಸತೀಶ್ ಕುಮಾರ್ ಮತ್ತೆ ಮಾಜಿ ಗ್ರಾಮ ಪಂಚಾಯತ್ ಸದಸ್ಯರ್ ಶ್ರೀಮತಿ ಎಡಿಕೇರಿ ಪುಷ್ಪವೇಣಿಯವು ನೆಂಟ್ರಾಗಿ ಇದ್ದೊ. ಜಂಭರಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಸದಸ್ಯರ್ ಉಪಸ್ಥಿತರಿದ್ದೊ.

13. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಕೊಡಗು ಗೌಡ ಸಮಾಜ, ಮೈಸೂರು ಇದರ ಕೂಡ್‌ಕಟ್ಟ್‌ಲಿ ಸೆಪ್ಟಂಬರ್ 24 ರ್‌ಂದ 26ರ್ರವರೆಗೆ

ಅರೆಭಾಷೆ ಸಂಸ್ಕೃತಿ ಶಿಬಿರ ಮೈಸೂರ್‌ನ  ಕೊಡಗು ಗೌಡ ಸಮಾಜದ ಸಭಾಂಗಣಲಿ ನಡ್‌ತ್. ಕೊಡಗು ಗೌಡ ಸಮಾಜ, ಮೈಸೂರ್‌ನ ಇದರ ಅಧ್ಯಕ್ಷರ್ ತೋಟಂಬೈಲು ಈ ಮನೋಹರ್‌ವು ಸೆಪ್ಟಂಬರ್ 24ರಂದ್ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನೆ ಮಾಡ್ದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವು ಉದ್ಘಾಟನಾ ಜಂಭರದ ಅಧ್ಯಕ್ಷತೆನ ವಯಿಸಿದೊ. ನಿವೃತ್ತ ಉಪ ಅರಣ್ಯ ಸಂರಕ್ಷಣಾಧಿಕಾರಿ ಕೂಡಕಂಡಿ ಬೆಳ್ಯಪ್ಪ, ಕೊಡಗು ಗೌಡ ಕ್ಷೇಮಾಭಿವೃದ್ಧಿ ಸಂಘ, ಹೂಟಗಳ್ಳಿ ಮೈಸೂರ್ ಇದರ ಅಧ್ಯಕ್ಷರದ ಆದ ನಡುಮನೆ ಚಂಗಪ್ಪ, ಮೈಸೂರ್‌ನ ಕೊಡಗು ಗೌಡ ಮಾಜಿ ಸೈನಿಕರ ಕ್ಷೇಮಾಭಿವೃದ್ಧಿ ಸಂಘದ ಅಧ್ಯಕ್ಷರ್ ಚಂಡೀರ ಕೆ ಬಸಪ್ಪ ಮತ್ತೆ ಕೊಡಗು ದಕ್ಷಿಣ ಕನ್ನಡ ಮಹಿಳಾ ಸಂಘ, ಮೈಸೂರ್ ಇದರ ಅಧ್ಯಕ್ಷರ್ ಶ್ರೀಮತಿ ದೇವಜನ ಗೀತಾ ಮೋಂಟಡ್ಕ ಇವು ಉದ್ಘಾಟನಾ ಜಂಭರದ ನೆಂಟ್ರಾಗಿ ಭಾಗವಿಯಿಸಿದೊ. ಕುಲ್ಲಚೆಟ್ಟಿ ಪೂವಯ್ಯ, ಶ್ರೀಮತಿ ಕಡ್ಯದ ಪಾರ್ವತಿ ಮತ್ತೆ ಚಂಡೀರ ಬಸಪ್ಪವು ಸಂಸ್ಕೃತಿ ಶಿಬಿರದ ಸಂಪನ್ಮೂಲ ವ್ಯಕ್ತಿಗಾಗಿ ಕೆಲ್ಸ ನಿರ್ವಯಿಸಿದೊ. ಸೆಪ್ಟಂಬರ್ 26ರಂದ್ ಮೈಸೂರು ಕೊಡಗು ಗೌಡ ಸಮಾಜದ ಸಭಾಂಗಣಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಲಕ್ಷ್ಮೀನಾರಾಯಣ ಕಜೆಗದ್ದೆವ್ರ ಅಧ್ಯಕ್ಷತೆಲಿ  ಸಮಾರೋಪ ಜಂಭರ ನಡ್‌ತ್. ಭಾರತೀಯ ಜೀವ ವಿಮಾ ನಿಗಮದ ನಿವೃತ್ತ ಡಿವಿಜನಲ್ ಮ್ಯಾನೇಜರ್ ಹೊಸಕ್ಲು ಸೋಮಣ್ಣ ಮತ್ತೆ ಮೈಸೂರು ಸರ್ಕಾರಿ ಪದವಿ ಪೂರ್ವ ಕಾಲೇಜ್‌ನ ಉಪನ್ಯಸಕರ್ ಪಟ್ಟಡ ಶಿವಕುಮಾರ್‌ವು ನೆಂಟ್ರಾಗಿ ಭಾಗವಯಿಸಿದೊ. ಜಂಭರಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಸದಸ್ಯರ್ ಉಪಸ್ಥಿತರಿದ್ದೊ.

14. ಕನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಗ್ರಾಮ ಗೌಡ ಸಮಿತಿ ಮಂಡೆಕೋಲು ಇದರ ಕೂಡ್‌ಕಟ್ಟ್‌ಲಿ ಅರೆಭಾಷೆ ಸಂಸ್ಕೃತಿ ಶಿಬಿರ ಸೆಪ್ಟಂಬರ್ 23ರ್‌ಂದ 25ರವ್ರಗೆ ಮಂಡೆಕೋಲು, ಅಮೃತ ಸಹಕಾರ ಸದನಲಿ ನಡ್‌ತ್. ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನೆನ ಮಂಡೆಕೋಲು ಗ್ರಾಮ ಪಂಚಾಯತ್ ಅದ್ಯಕ್ಷರ್ ಶ್ರೀಮತಿ ವಿನುತ ಪಾತಿಕಲ್ಲುವು ನಡ್ಸಿಕೊಟ್ಟೊ. ಗಾಮ ಗೌಡ ಸಮಿತಿ, ಮಂಡೆಕೋಲು ಇದರ ಅಧ್ಯಕ್ಷರ್ ಜನಾರ್ದನ ಬರೆಮೇಲುವು ಉದ್ಘಾಟನಾ ಜಂಭರದ ಅಧ್ಯಕ್ಷತೆನ ವಹಿಸಿಕಂಡಿದೊ. ಬಜಪ್ಪಿಲ ಉಳ್ಳಕುಲು ದೇವಸ್ತಾನದ ಮೊಕ್ತೇಸರರ್ ಹೇಮಂತ್ ಕುಮಾರ್ ಗೌಡರಮನೆ ಅವು ನೆಂಟ್ರಾಗಿ ಇದ್ದೊ. ಕೇಶವ ಗೌಡ ಬಾಳೆಕೋಡಿ, ಚಂದ್ರಶೇಖರ ನಾರಾಲು. ಶ್ರೀಮತಿ ದಿವ್ಯಲತಾ ಚೌಟಾಜೆವು ಸಂಪನ್ಮೂಲ ವ್ಯಕ್ತಿಗಾಗಿ ಕೆಲ್ಸ ಮಾಡ್ದೊ. ಸಮಾರೋಪ ಜಂಭರ ಸೆಪ್ಟಂಬರ್ 25ರಂದ್ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್ ಆದ  ಲಕ್ಷ್ಮೀನಾರಾಯಣ ಕಜೆಗದ್ದೆವ್ರ ಅಧ್ಯಕ್ಷತೆಲಿ ನಡ್‌ತ್. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಮಾಜಿ ಸದಸ್ಯರ್ ಸದಾನಂದ ಮಾವಜಿ ಮತ್ತೆ ಚಂದ್ರಪ್ಪ ಗೌಡ ಪಾತಿಕಲ್ಲುವು ನೆಂಟ್ರಾಗಿ ಜಂಭರಕ್ಕೆ ಬಂದಿದೊ. ಜಂಭರಲಿ ಶಿಬಿರದ ಸದಸ್ಯ ಸಂಚಾಲಕರ್ ಕುಸುಮಾಧರ.ಎ.ಟಿವು ಮತ್ತೆ ಅಕಾಡೆಮಿನ ಸದಸ್ಯರ್ ಉಪಸ್ಥಿತಿ ಇದ್ದೊ.

# ಕರ್ನಾಟಕ ಅರೆಭಾಷೆ ಮತ್ತು ಸಾಹಿತ್ಯ ಅಕಾಡೆಮಿ

## ಅಧ್ಯಕ್ಷರು ಮತ್ತು ಸದಸ್ಯರ ವಿಳಾಸ

**ಅಧ್ಯಕ್ಷರು**
**ಶ್ರೀ ಲಕ್ಷ್ಮೀ ನಾರಾಯಣ ಕಜೆಗದ್ದೆ**
ಕನಕಮಜಲು ಅಂಚೆ,
ಸುಳ್ಯ ತಾಲೂಕು, ದ.ಕ 574223
ಮೊ.ನಂ 9449082249,
kajegadde@gmail.com

**ಸದಸ್ಯರು**
**ಶ್ರೀಮತಿ ಜಾನಕಿ ಬೈತಡ್ಕ**
#21–16. ರೇಸ್‌ಕೋರ್ಸ್ ರಸ್ತೆ,
ಎಲ್‌ಐಸಿ ಹತ್ತಿರ, ಮಡಿಕೇರಿ, ಕೊಡಗು.
ಮೊ ನಂ 9008571899

**ಶ್ರೀಮತಿ ಸ್ಮಿತಾ ಅಮೃತರಾಜ್**
'ಹಸಿರು'
ಬಾಲೆಂಬಿ ಅಂಚೆ, ಚೆಂಬು ಗ್ರಾಮ
ಮಡಿಕೇರಿ ತಾಲೂಕು
ಮೊ ನಂ 9980402968

**ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ**
ಟಿ.ಜಾನ್ ಲೇಔಟ್,
ಶಕ್ತಿ ಕ್ವಾಟ್ರಸ್
ಮಡಿಕೇರಿ
ಮೊ.ನಂ 9900992360

**ಶ್ರೀ ಎ.ಪಿ. ಧನಂಜಯ ಅಗೋಳಿಕಜೆ**
2ನೇ ಮೊಣ್ಣಂಗೇರಿ ಗ್ರಾಮ
ಮದೆ ಅಂಚೆ,
ಮಡಿಕೇರಿ ತಾಲೂಕು
ಮೊ ನಂ 9449731238

**ಶ್ರೀ ಆನಂದ ದಂಬೆಕೋಡಿ**
ಮೇಘಸಂದ್ಯೆ ಎಸ್ಟೇಟ್,
ಕತ್ತಲೆಕಾಡು ಗ್ರಾಮ,
ಕಡಗದಾಳು ಅಂಚೆ
ಮಡಿಕೇರಿ ತಾಲೂಕು
ಮೊ.ನಂ. : 9448141502

**ಡಾ. ದಯಾನಂದ ಕೂಡಕಂಡಿ**
ಬಿನ್. ಚಂದ್ರಹಾಸ ಕೆ.ಟಿ.
ತಾವೂರು ಗ್ರಾಮ, ಭಾಗಮಂಡಲ
ಮಡಿಕೇರಿ ತಾಲೂಕು
ಮೊ. ನಂ. : 9449766772
dayanandakudakandi@gmail.com

**ಶ್ರೀ ಕುಸುಮಾಧರ ಎ.ಟಿ.**
ಬಿನ್. ತ್ಯಾಂಪಣ್ಣಗೌಡ
ಅಳಿಕೆ ಮಜಲು ಮನೆ
ಕಾಯರ್ತೋಡಿ, ಸುಳ್ಯ
ಮೊ. ನಂ. : 7090133686

**ಡಾ. ವಿಶ್ವನಾಥ ಬದಿಕಾನ**
ಬಿನ್. ಹೂವಪ್ಪಗೌಡ ಬದಿಕಾನ
ನಂ. 9–88/9,
ಫ್ಲಾಟ್ ನಂ.. 407(34)
ಧ್ರುವ ರೆಸಿಡೆನ್ಸಿ, ಎಕ್ಕೂರು,
ಕಂಕನಾಡಿ –575002,
ಮಂಗಳೂರು, ದಕ್ಷಿಣ ಕನ್ನಡ
ಮೊ. ನಂ. : 9449615474

**ಶ್ರೀ ಜಯಪ್ರಕಾಶ್ ಮೋಂಟಡ್ಕ**
ಕೌಸ್ತುಭ ನಿಲಯ, ಬಿಳಿನೆಲೆ ಗ್ರಾಮ
ನೆಟ್ಟಣ ಅಂಚೆ, ಕಡಬ ತಾಲೂಕು
ದಕ್ಷಿಣ ಕನ್ನಡ–574 230
ಮೊ. ನಂ. : 9480293464
7406141591

**ಶ್ರೀ ಪುರುಷೋತ್ತಮ ಕಿರ್ಲಾಯ**
ಬಿನ್. ದೇವಣ್ಣ ಗೌಡ ಕೆ.
ಕಿರ್ಲಾಯ ಮನೆ
ಅರಂತೋಡು ಗ್ರಾಮ ಮತ್ತು ಅಂಚೆ
ಸುಳ್ಯ ತಾಲೂಕು, ದಕ್ಷಿಣ ಕನ್ನಡ
ಮೊ. ನಂ. : 9449770439

**ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು**
'ಚಾಣಕ್ಯ'
ಸರಕಾರಿ ಪ್ರಥಮ ದರ್ಜೆ ಕಾಲೇಜು
ಮುಂಭಾಗ, ಗಾಂಧಿನಗರ,
ಕಾವೂರು,
ಮಂಗಳೂರು, ದ.ಕ–575015.
ಮೊಬೈಲ್ : 9448216070

**ಶ್ರೀ ಭರತೇಶ ಅಲಸಂಡೆಮಜಲು**
ಅಲಸಂಡೆಮಜಲು ಮನೆ
ಕೊಳ್ತಿಗೆ ಗ್ರಾಮ,
ಪುತ್ತೂರು ತಾಲೂಕು
ದಕ್ಷಿಣ ಕನ್ನಡ–574 212,
ಮೊ. ನಂ. : 9008027271

**ಶ್ರೀ ಕಿರಣ್ ಕುಂಬಳಚೇರಿ**
ಬಿನ್. ಕೇಶವ ಕೆ.ಎ. ಕುಂಬಳಚೇರಿ
ಮನೆಪೆರಾಜೆ ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ
ಮೊ. ನಂ. : 9164069225

ರಿಜಿಸ್ಟ್ರಾರ್
**ಶ್ರೀ ಚಿನ್ನಸ್ವಾಮಿ**
ಸಹಾಯಕ ನಿರ್ದೇಶಕರು
ವಾರ್ತಾ ಇಲಾಖೆ
ವಾರ್ತಾ ಭವನ, ಕೊಡಗು ಜಿಲ್ಲೆ
ಮಡಿಕೇರಿ
ಮೊ: 9945045327

ಅರ್ಥ ಸದಸ್ಯರು
**ಶ್ರೀಮತಿ ಕೆ.ಟಿ. ದರ್ಶನ**
ಸಹಾಯಕ ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕೊಡಗು ಜಿಲ್ಲೆ, ಮಡಿಕೇರಿ
ಮೊ: 9483110593

## ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ
2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ
3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
4 ಕಂಕುಮ : ಪೂಜಾರೀರ ಜಿ. ಮಾದಪ್ಪ
5 ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು
6 ಬೇಟೆನ ಬಿರ್ಸ– ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
7 ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ
8 ತೋರಣ : ಬಾರಿಯಂಡ ಆರ್. ಜೋಯಪ್ಪ
9 ಬೊಲ್ಪು : ಲೋಕೇಶ್ ಕುಂಚಡ್ಕ
10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ
11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ
12 ಹೊಸ ಬೊದ್ಕ್ : ಉದಯಕುಮಾರಿ ಚೆಂಬು
13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ
14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ
15 ಅನುಭವ ಧಾರೆ : ಹೊದ್ದೆಟ್ಟಿ ಭವಾನಿಶಂಕರ
16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.
17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ.
18 ಬದುಕು : ಎಂ.ಜಿ. ಕಾವೇರಮ್ಮ
19 ನೆಂಪುನ ಜೊಂಪೆ : ವಿನೋದ್ ಮೂಡಗದ್ದೆ
20 ಕಾಡ್‌ನ ಮಕ್ಕ : ಕೆ.ಆರ್. ತೇಜಕುಮಾರ್
21 ಅಪ್ಪ ಹೇಳ್ದ ಹತ್ತ್ ಕತೆಗ : ಭವಾನಿ ಶಂಕರ್ ಅಡ್ತಲೆ
22 ನೆಗೆ ಬೇಕ್ ಕೇದಗೆ ಗೊನೆ ಹಾಂಗೆ : ಡಾ॥ ಕರುಣಾಕರ ನಿಡಂಜಿ
23 ತಬ್ಲಿ ಮಂಜ : ಪಿ.ಜಿ. ಅಂಬೆಕಲ್
24 ಮಿಂಪುಳಿ : ಡಾ॥ ಪುನೀತ್ ರಾಘವೇಂದ್ರ ಕುಂಟುಕಾಡು
25 ಅರೆಬಾಸೆ ವ್ಯಾಕರಣ : ಪ್ರೊ. ಕೆ. ಕುಶಾಲಪ್ಪ ಗೌಡ
26 ಅಪೂರ್ವ ಸಂಗಮ : ಕಟ್ರತನ ಲಲಿತಾ ಅಯ್ಯಣ್ಣ
27 ಪುಂಸ್ತ್ರೀ (ಅರೆಭಾಷೆಗೆ ತರ್ಜುಮೆ) : ಎಂ.ಜಿ. ಕಾವೇರಮ್ಮ
28 ಕಲ್ಯಾಣಸ್ವಾಮಿ (ಅರೆಭಾಷೆಗೆ ತರ್ಜುಮೆ) : ಸಂಗೀತ ರವಿರಾಜ್




ಸುಳ್ಯಲಿ ಮೋಹನ ಸೋನರ ಸಾಕ್ಷ್ಯಚಿತ್ರ ಬಿಡ್‌ಗಡೆ



ಅಕಾಡೆಮಿನ ವತಿಂದ ಏನೆಕಲ್‌ಲಿ ವಾದ್ಯ ಪರಿಕರಗಳ ಹಂಚಿಕೆ



ಮೂರ್ನಾಡ್‌ಲಿ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನೆ



ಪಿರಿಯಾಪಟ್ಟಣಲಿ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನೆ



ಮಂಡೆಕೋಲುಲಿ ಅರೆಭಾಷೆ ಸಂಸ್ಕೃತಿ ಶಿಬಿರದ ಉದ್ಘಾಟನೆ

HINGARA AREBHASHE QUARTERLY VOLUME-5, ISSUE-7
DATE : 30-09-2021 KODAGU KARARB/2016/69571 PRICE : RS. 20/- PAGES : 80




ಒಲಂಪಿಕ್ ಕೋಚ್ ಅಂಕಿತಾ ಸುರೇಶ್ ಅವ್ರ ಒಟ್ಟಿಗೆ ಅಕಾಡೆಮಿನ ಅಧ್ಯಕ್ಷರ್ ಮತ್ತೆ ಸದಸ್ಯರ್‌ಗ



ಮೈಸೂರ್‌ಲಿ ಅರೆಭಾಷೆ ಸಂಸ್ಕೃತಿ ಶಿಬಿರದ ಶಿಬಿರಾರ್ಥಿಗ



ಕೆ.ಎಸ್.ಎಸ್.ಕಾಲೇಜ್‌ಲಿ ಸಂಸ್ಕೃತಿ ಶಿಬಿರದ ಶಿಬಿರಾರ್ಥಿಗ



ಮಡಿಕೇರಿಲಿ ನಡ್ದ ಮೋಹನ ಸೋನರ ಸಾಕ್ಷ್ಯಚಿತ್ರದ ಪದರ್ಶನ

Printed by Chinnaswamy on behalf of Registrar, Karnataka Arebhase Samskruthi Mathu Sahitya Academy and Published by Chinnaswamy on behalf of Karnataka Arebhase Samskruthi Mathu Sahitya Academy (name of owner) and Printed at Aakrithi Prints, Light House Hill Road, Mangaluru and Published at Karnataka Arebhase Samskruthi Mathu Sahitya Academy, Coffee Krupa Building, Ist Floor, Raja Seat Road, Madikeri, Kodagu District. Editor : Dr. Dayananda Kudakandi